# ಮಕ್ಕಳ ಮಂಛೌಸನ್

ಇಂಗ್ಲಿಷಿನಲ್ಲಿ ಪ್ರಸಿದ್ಧವಾದ
ಈ ಕಥೆಯನ್ನು
ಮಕ್ಕಳಿಗಾಗಿ ಸಂಗ್ರಹಿಸಿದೆ

ಸಂಪಾದಕ
**ಜಿ. ಪಿ. ರಾಜರತ್ನಂ**

**ಸತ್ಯಶೋಧನ ಪ್ರಕಟನ ಮಂದಿರ**
**ಕೋಟೆ, ಬೆಂಗಳೂರು**

**೧೯೪೬ ]** **[ ಹತ್ತಾಣೆ**

## ಜಿ. ಪಿ. ರಾಜರತ್ನಂ ಅವರ



### ಶಿಶು ಸಾಹಿತ್ಯ

- ತುತ್ತೂರಿ
- ಕಡಲೆಪುರಿ
- ಚುಟುಕ
- ಗುಲಗಂಜಿ
- ಕೆನೆಹಾಲು
- ಕಲ್ಲುಸಕ್ಕರೆ
- ಕೋಳಿ ಕಳ್ಳ
- ಮೆರವಣಿಗೆ
- ತಾರೆ
- ಕಣ್ಣಿಗೆ ಹಬ್ಬ
- ಮಕ್ಕಳ ಗಾಂಧಿ
- ಗಿಳಿಮರಿಗಳ ಗಾಂಧಿ

### ಬಾಲ ಸಾಹಿತ್ಯ

- ಗೌತಮ ಬುದ್ಧ
- ಶ್ರೀರಾಮಚಂದ್ರ
- ಅಶೋಕಮೌರ್ಯ
- ಶ್ರೀಹರ್ಷ
- ಯೇಸುಕ್ರಿಸ್ತ
- ನರಿಯ ಬಾಲ
- ದಾನವೀರ ವಿಶ್ವಂತರ
- ಪಂಚಾಯುಧ
- ಮಣಿಕಂಠ
- ತೆನಾಲಿ ರಾಮ
- ಮಕ್ಕಳ ಮಂಛೌಸನ್
- ಪುಟಾಣಿ ಪಂಚತಂತ್ರ

ಐದರಿಂದ ಹದಿನೈದರ ವರೆಗಿನ ಮಕ್ಕಳಿಗೆ
ಶುಚಿಯಾದ ಸ್ವಚ್ಛವಾದ ಸಚಿತ್ರವಾದ ಸ್ವಾರಸ್ಯವಾದ ಸಾಹಿತ್ಯ

**ಸತ್ಯಶೋಧನ ಪುಸ್ತಕ ಭಂಡಾರ**
**ಕೋಟೆ :: ಬೆಂಗಳೂರು**

# ಒಳಗಿನ ಕಥೆಗಳ ಪಟ್ಟಿ

# ಚಿತ್ರಗಳ ಪಟ್ಟಿ

# ಮಕ್ಕಳ ಮುಂಛೌಸನ್

## ನನ್ನ ಕಥೆ

ನನ್ನ ಹೆಸರು ' ಮುಂಛೌಸನ್ '. ' ಬ್ಯಾರನ್ ಮುಂಚ್ ಹೌಸನ್ ' ಎಂದು ನನ್ನನ್ನು ಕರೆಯುತ್ತಾರೆ. ನಮ್ಮ ದೇಶಗಳಲ್ಲಿ ' ಬ್ಯಾರನ್ ' ಎಂದರೆ ನಿಮ್ಮ ದೇಶದಲ್ಲಿ ' ಪಾಳೆಯಗಾರ ' ಎಂದ ಹಾಗೆ. ನಮ್ಮ ದೇಶ ಹಾಲೆಂಡ್.

ನನಗೆ ಚಿಕ್ಕಂದಿನಿಂದಲೂ ಊರೂರು ಸುತ್ತುವುದು ಎಂದರೆ ಪರಮಪ್ರೀತಿ. ನಾನೂ ಹೋದ ಹೋದ ಕಡೆಯಲ್ಲೆಲ್ಲ ಅನೇಕ ಅದ್ಭುತವಾದ ಸಾಹಸ ಕಾರ್ಯಗಳನ್ನು ಮಾಡಿದ್ದೇನೆ. ನನ್ನ ಸಾಹಸಕೃತ್ಯಗಳನ್ನು ಇತರರಿಗೆ ವರ್ಣಿಸಿ ಹೇಳುವ ಅಭ್ಯಾಸ ನಾನು ಹುಟ್ಟಿದಾಗಿನಿಂದಲೂ ನನಗೆ ಇದೆ.

ಆದರೆ ನಾನು ಹೇಳಿದ ಕತೆಗಳನ್ನು ಕೇಳಿದವರು ಯಾರೂ ಅವು ನಿಜವೆಂದು ನಂಬುವುದಿಲ್ಲ. ಶುದ್ಧ ಬುರುಡೆ, ಬೊಗಳೆ, ಉಡಾಫೆ, ತರಗು ಬಂಡಿ ಎಂದು ಅನೇಕ ರೀತಿಯಾಗಿ ಅದನ್ನು ಹಾಸ್ಯಮಾಡುತ್ತಾರೆ. ಅದಕ್ಕೆ ನಾನೇನು ಮಾಡಲಿ? ' ನಂಬಿದರೆ ನಂಬಿ, ಬಿಟ್ಟರೆ ಬಿಡಿ ' ಎಂದುಕೊಂಡು, ಕೇಳಿದವರು ಸಿಕ್ಕಿದರೆ ನನ್ನ ಪಾಡಿಗೆ ನಾನು ನನ್ನ ಸಾಹಸಗಳನ್ನು ವರ್ಣಿಸುತ್ತೇನೆ.

ಆದರೂ ನನ್ನ ಅದ್ಭುತ ಕಾರ್ಯಗಳನ್ನು ಮೆಚ್ಚಿಕೊಂಡು, ಅವು ಸತ್ಯವೆಂದು ಸಾಕ್ಷಿ ಹೇಳುವುದಕ್ಕೆ ಮೂರು ಜನ ಮಹಾ ಪುರುಷರು ಸದಾ ಸಿದ್ಧವಾಗಿರುವರೆಂದು ತಿಳಿಸಲು ನನಗೆ ತುಂಬ ಸಂತೋಷವಾಗುತ್ತದೆ. ಪ್ರಸಿದ್ಧರಾದ ಆ ಮೂವರ ಹೆಸರುಗಳನ್ನು ನೀವೂ ಕೇಳಿರಬಹುದು.

ಮೊದಲನೆಯವನು ಅರಬ್ಬೀದೇಶದ ಸಿಂದಬಾದ ನಾವಿಕ. ಇವನೂ ನನ್ನ ಹಾಗೆಯೇ ದೇಶದೇಶಾಂತರಗಳನ್ನೆಲ್ಲ ತಿರುಗಿ, ತಾನು ಕಂಡದ್ದನ್ನು ಹೇಳಿದರೆ, ಅವನ ಕತೆಗಳನ್ನು ಯಾರೂ ನಂಬದೆ ಹೋದರು. ಈ ಸಿಂದಬಾದ ನನ್ನ ಕತೆಗಳನ್ನು ನಂಬುತ್ತಾನೆ.

ಎರಡನೆಯವನು ಇಂಗ್ಲೆಂಡು ದೇಶದ ಗಲಿವರ ಎಂಬವನು. ಇವನು ಒಂದು ಸಲ ಲಿಲಿಪುಟ್ ಎಂಬ ದೇಶಕ್ಕೆ ಹೋಗಿದ್ದಾಗ, ಅಲ್ಲಿನ ಜನ ತುಂಬೇಗಿಡಕ್ಕೆ ಏಣಿ ಹಾಕಿಕೊಂಡು ಹತ್ತುವುದನ್ನು ನೋಡಿದ್ದ. ಅವರಲ್ಲಿ ಐವತ್ತು ಜನರನ್ನು ತನ್ನ ಒಂದು ಅಂಗೈಯಲ್ಲಿ ಎತ್ತಿಕೊಂಡಿದ್ದ. ಇವನೇ ಇನ್ನೊಮ್ಮೆ ಬ್ರಾಬ್‌ಡಿಂಗ್‌ನಾಗ್ ಎಂಬ ದೇಶಕ್ಕೆ ಹೋಗಿದ್ದ. ಅಲ್ಲಿನ ಜನ ನೆಲದ ಮೇಲೆ ನಿಂತುಕೊಂಡೇ ತೆಂಗಿನಕಾಯಿ ಕೀಳುತ್ತಿದ್ದರು. ಅವರ ಕೈಗಳ ಉಗುರಿನ ಮೇಲೆ ಈ ಗಲಿವರ ಜಾರುಗುಪ್ಪೆ ಆಟವಾಡಿದ್ದ. ಇವನು ಅದನ್ನೆಲ್ಲಾ ವರ್ಣಿಸಿದಾಗಲೂ ಯಾರೂ ನಂಬಲಿಲ್ಲ. ಇಂಥವನು ನನ್ನ ಕತೆಗಳನ್ನು ಸತ್ಯವೆಂದು ಹೇಳುತ್ತಾನೆ.

ಮೂರನೆಯವನು ಪರ್ಷಿಯಾದೇಶದ ಅಲ್ಲಾವುದ್ದೀನ್. ಅದ್ಭುತ ದೀಪವನ್ನು ಸಂಪಾದಿಸಿ, ಅದರ ಸಹಾಯದಿಂದ ಮಹಾ ಭೂತವೊಂದನ್ನು ಕೈವಶಪಡಿಸಿಕೊಂಡು, ಅದರ ಮೂಲಕವಾಗಿ ಚೀನಾದೇಶದ ಚಕ್ರವರ್ತಿಯ ಸ್ವಂತ ಮಗಳನ್ನು ಮದುವೆಯಾದ ಈ ಮಹಾಪುರುಷ ನನ್ನ ಕತೆಗಳು ತನ್ನ ಕಣ್ಣಾಣೆಗೂ ನಿಜವೆಂದು ಸಾರಿ ಸಾರಿ ಹೇಳುತ್ತಾನೆ.

ಇಂತಹ ಮಹಾಪುರುಷರ ಮಾತಿಗೆ ಕೂಡ ಬೆಲೆ ಕೊಡದೆ, ನಾನು ಹೇಳುವ ಸಂಗತಿಗಳನ್ನು ಸುಳ್ಳು ಎಂದು ತಳ್ಳಿಹಾಕುವುದಾದರೆ, ಅಂಥವರನ್ನು ಮೆಚ್ಚಿಸುವುದು ದೇವರಿಗೆ ಕೂಡ ಸಾಧ್ಯವಿಲ್ಲ. ಆದ್ದರಿಂದ, ನನ್ನ ಪದ್ಧತಿಯ ಪ್ರಕಾರ, 'ನಂಬಿದರೆ ನಂಬಿ,

ಬಿಟ್ಟರೆ ಬಿಡಿ' ಎಂದುಕೊಂಡು, ನನಗೆ ಸಂಭವಿಸಿರುವ ಅನೇಕಾನೇಕ ಅದ್ಭುತ ಕಾರ್ಯಗಳಲ್ಲಿ ಕೆಲವನ್ನು ಮಕ್ಕಳಾದ ನಿಮಗೆ ಹೇಳುತ್ತೇನೆ.

## ಸಿಂಹ ಮೊಸಳೆಗಳ ಸಂಹಾರ

ನನಗೆ ಚಿಕ್ಕಂದಿನಿಂದಲೂ ದೇಶ ದೇಶ ತಿರುಗಾಡುವ ಹುಚ್ಚು ಬಹಳ. ನನಗೆ ಮಾತ್ರವಲ್ಲ, ನನ್ನ ತಂದೆಯವರಿಗೂ ಹಾಗೆಯೇ. ಆದರೆ ಮಾತ್ರ ಅವರು ನನ್ನ ಪ್ರಯಾಣಗಳಿಗೆ ಸುಲಭವಾಗಿ ಒಪ್ಪಿಗೆ ಕೊಡುತ್ತಿರಲಿಲ್ಲ. ಒಂದು ಸಲ ನನ್ನ ಚಿಕ್ಕಪ್ಪನ ಮಗ ಸಿಂಹಳ ದ್ವೀಪದಿಂದ ನಮ್ಮೂರಿಗೆ ಬಂದು, ಹಿಂದಿರುಗುವಾಗ ನಮ್ಮ ತಂದೆ ಯನ್ನು ಒಡಂಬಡಿಸಿ, ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋದ. ನಮ್ಮ ಹಾಲೆಂಡಿನಿಂದ ಸಿಂಹಳಕ್ಕೆ ಹೋಗಬೇಕಾದರೆ ಸಮುದ್ರದ ಮೇಲೆ ಹಡಗಿನಲ್ಲಿ ಹಾಯ್ದು ಹೋಗಬೇಕು. ಆ ಮಾರ್ಗದಲ್ಲಿ ಎಷ್ಟೋ ದ್ವೀಪಗಳು ಸಿಕ್ಕುತ್ತವೆ. ಅವುಗಳಲ್ಲಿ ಒಂದು ದ್ವೀಪದ ಹತ್ತಿರ ಬಂದಾಗ ನಡೆದ ಒಂದು ಅದ್ಭುತವನ್ನು ಹೇಳುತ್ತೇನೆ:

ಆ ದ್ವೀಪದಲ್ಲಿ ಒಂದು ವಿಚಿತ್ರ! ಏನೆಂದರೆ, ಬಿರುಗಾಳಿ ಜೋರಾಗಿ ಬೀಸಿದಾಗ, ನೆಲದಲ್ಲಿ ಬೇರು ಬಿಟ್ಟುಕೊಂಡಿದ್ದ ಮರ ಗಳೆಲ್ಲ ಬೇರುಗಳನ್ನು ಸಡಿಲಮಾಡಿಕೊಂಡು, ನೆಲದಿಂದ ಮೇಲ ಕ್ಕೆದ್ದು, ಐದು ಮೈಲಿಗಳ ಎತ್ತರದಲ್ಲಿ, ಬಿರುಗಾಳಿ ಬೀಸುತ್ತಿರುವ ವರೆಗೂ ಹಾರಾಡುತ್ತಿರುವುವು. ಬಿರುಗಾಳಿ ನಿಂತ ಮೇಲೆ, ನೇರವಾಗಿ ಕೆಳಗಿಳಿದು ಬಂದು, ಮೊದಲಿನ ಹಾಗೆಯೇ ತಮ್ಮ ತಮ್ಮ ಹಳ್ಳಗಳಲ್ಲಿ ಬೇರು ಬಿಟ್ಟು ಬಲವಾಗಿ ನಿಂತುಕೊಳ್ಳುವುವು. ಹೀಗೆ ಆ ದ್ವೀಪದ ದೊಡ್ಡ ಮರಗಳು ಬಿರುಗಾಳಿಯ ಹೊಡೆತದಿಂದ ತಪ್ಪಿಸಿಕೊಳ್ಳಲು ಈ ಉಪಾಯ ಮಾಡಿಕೊಂಡಿದ್ದುವು.

ನಾವು ಹೋದ ಸಮಯದಲ್ಲೂ ಹೀಗೇ ಒಂದು ಬಿರುಗಾಳಿ ಎದ್ದಿತು; ಮರಗಳೂ ಐದು ಮೈಲಿ ಮೇಲಕ್ಕೆ ಎದ್ದು, ಸಣ್ಣ ಹಕ್ಕಿಯ ಪುಕ್ಕಗಳ ಹಾಗೆ ಹಾರಾಡುತ್ತಿದ್ದುವು. ಬಿರುಗಾಳಿ ನಿಂತಾಗ, ಅವುಗಳೆಲ್ಲಾ ಮೊದಲಿನ ಹಾಗೆಯೇ ನೆಲದಲ್ಲಿ ನಿಂತು ಕೊಳ್ಳಲು ಕೆಳಗಿಳಿದುವು. ಎಲ್ಲಾ ಮರಗಳೂ ತಮ್ಮ ತಮ್ಮ ಹಳ್ಳಗಳಲ್ಲಿ ನೆಟ್ಟುಕೊಂಡುವು. ಆದರೆ ಒಂದು ಮರ ಮಾತ್ರ ನೇರವಾಗಿ ನಿಲ್ಲಲಾರದೆ ಅಡ್ಡವಾಗಿ ದೊಪ್ಪನೆ ಬಿತ್ತು. ಅದು ಹಾಗೆ ಬಿದ್ದುದಕ್ಕೆ ಕಾರಣ ಇಷ್ಟೆ: ಆ ದ್ವೀಪದ ಒಬ್ಬ ರೈತನೂ ಅವನ ಹೆಂಡತಿಯೂ ತಮ್ಮ ಹಸುವಿಗೆ ಹುಲ್ಲು ಕುಯ್ದು ತರಬೇಕೆಂದು ಆ ಮರದ ಮೇಲೆ ಹತ್ತಿದ್ದರು. ಆ ದ್ವೀಪದಲ್ಲಿ ಹುಲ್ಲು ಮರಗಳ ತುದಿಯಲ್ಲೇ ಬೆಳೆಯುತ್ತಿತ್ತು. ಅದನ್ನು ಕುಯ್ದು ತರಬೇಕೆಂದು ಅವರು ಮರವನ್ನು ಹತ್ತಿದ ಸ್ವಲ್ಪ ವೇಳೆಯಲ್ಲಿಯೇ ಬಿರುಗಾಳಿ ಎದ್ದಿತು. ಅವರು ಕೆಳಗೆ ಇಳಿಯುವುದರೊಳಗಾಗಿ ಆ ಮರ ಇತರ ಮರಗಳ ಜೊತೆಗೆ ಮೇಲೆದ್ದು ಐದು ಮೈಲಿ ಎತ್ತರ ಹೋಗಿಬಿಟ್ಟಿತ್ತು. ಬಿರುಗಾಳಿ ನಿಂತು, ಮರಗಳು ಕೆಳಗಿಳಿದಾಗ, ಈ ಮರ ಮಾತ್ರ ಅವರಿಬ್ಬರ ಭಾರದಿಂದ ನೇರವಾಗಿ ಬೀಳದೆ ಓರೆಯಾಗಿ ಮಗುಚಿಕೊಂಡಿತು. ಆದರೆ ಆ ಮರ ಹಾಗೆ ಮಗುಚಿಕೊಂಡದ್ದರಿಂದ ಅವರಿಬ್ಬರಿಗೂ ಏನೂ ಗಾಯವಾಗಲಿಲ್ಲ. ಆ ದ್ವೀಪದ ಮುಖಂಡನಾದ ನಾಯಕ ಮಾತ್ರ ಆ ಮರದ ಅಡಿಯಲ್ಲಿ ಸಿಕ್ಕಿಕೊಂಡು ಅಪ್ಪಚ್ಚಿಯಾಗಿ ಹೋದ. ಅವನು ಸತ್ತುಹೋದುದಕ್ಕೆ ಆ ದ್ವೀಪದವರು ಯಾರೂ ಏನೂ ಸಂಕಟ ಪಡಲಿಲ್ಲ. ಅವನು ಆ ಜನರನ್ನು ಬಹಳವಾಗಿ ಪೀಡಿಸುತ್ತಿದ್ದನಂತೆ. ಆದ್ದರಿಂದ ಆ ದ್ವೀಪದ ಜನ ಅವನು ಸತ್ತದ್ದಕ್ಕೆ ಸಂತೋಷಪಟ್ಟು, ಅವನು ಸಾಯುವ ಹಾಗೆ ಮರ ಬೀಳುವುದಕ್ಕೆ ಕಾರಣರಾದ ಆ

ರೈತನನ್ನೂ ಅವನ ಹೆಂಡತಿಯನ್ನೂ ತಮಗೆ ನಾಯಕರನ್ನಾಗಿ ಆರಿಸಿಕೊಂಡರು.

ಇದಿಷ್ಟನ್ನೂ ನಾವು ಹಡಗಿನಲ್ಲಿ ಹೋಗುತ್ತಿರುವಾಗಲೇ ನೋಡಿದೆವು. ನಾವು ಅಲ್ಲಿ ನಿಲ್ಲಲಿಲ್ಲ; ನೇರವಾಗಿ ಸಿಂಹಳಕ್ಕೆ ಹೋದೆವು. ಅಲ್ಲಿಯೇ ನಾನು ಸಿಂಹವನ್ನೂ ಮೊಸಳೆಯನ್ನೂ ಒಟ್ಟಿಗೆ ಸಂಹಾರಮಾಡಿದ್ದು.

ನಾವು ಸಿಂಹಳಕ್ಕೆ ಹೋಗಿ ಹತ್ತು ಹದಿನೈದು ದಿನಗಳಾಗಿರ ಬಹುದು; ನನ್ನ ಚಿಕ್ಕಪ್ಪನ ಮಗ "ಬೇಟೆಗೆ ಹೋಗೋಣ, ಬಾ" ಎಂದು ಕರೆದ. ಇಬ್ಬರೂ ಬೇಟೆಗೆ ಹೊರಟೆವು. ಅವನಂತೂ ನನಗಿಂತ ಗಟ್ಟಿಮುಟ್ಟಾದ ಆಸಾಮಿ, ಸಿಂಹಳದ ಬೆಟ್ಟಕಾಡುಗಳ ಲ್ಲೆಲ್ಲ ಸುತ್ತಾಡಿ ಅಭ್ಯಾಸವಿತ್ತು. ಆದ್ದರಿಂದ ಅವನು ಮುಂದೆ ಮುಂದೆ ಹೋದ. ನಾನು ಹಿಂದೆ ನಿದಾನವಾಗಿ ಬರುತ್ತಿದ್ದೆ.

ಹೋಗುತ್ತಿರುವಾಗ ಬಲಗಡೆ ಒಂದು ಆಳವಾದ ಕೊಳ ಸಿಕ್ಕಿತು. ಅದರ ನೀರನ್ನೇ ನೋಡುತ್ತಿರುವಾಗ ಹಿಂದುಗಡೆ ಏನೋ ಶಬ್ದವಾದ ಹಾಗಾಗಲು, ತಿರುಗಿ ನೋಡಿದರೆ, ಒಂದು ಮಹಾ ಭಯಂಕರವಾದ ಸಿಂಹಳದ ಸಿಂಹ ನನ್ನ ಹಿಂದುಗಡೆ ನಿಂತು ಗುರ್ರೆನ್ನುತ್ತಿತ್ತು. ನನಗಂತೂ ತುಂಬಾ ಭಯವಾಯಿತು. ಕೈಯಲ್ಲೇನೋ ಕತ್ತಿಯಿತ್ತು, ಬಂದೂಕವೂ ಇತ್ತು. ಆದರೆ ಸಿಂಹವನ್ನು ಕತ್ತಿಯಿಂದ ಎದುರಿಸಲು ನನಗೆ ಧೈರ್ಯ ಸಾಲದು. ಬಂದೂಕದಿಂದ ಹೊಡೆಯೋಣವೆಂದರೆ, ನನ್ನ ಹತ್ತಿರ ದೊಡ್ಡ ಗುಂಡು ಇರಲಿಲ್ಲ, ಹಕ್ಕಿಗಳನ್ನು ಹೊಡೆಯುವ ಸಣ್ಣ ಚರೆ ಇತ್ತು. ಓಡಿಹೋಗೋಣ ಎಂದು ಮುಂದೆ ನೋಡಿದರೆ, ಅದುವರೆಗೆ ಇಲ್ಲದಿದ್ದ ಒಂದು ದೊಡ್ಡ ಮೊಸಳೆ ಆ ಎಂದು ಬಾಯಿ ತೆರೆದು ಕೊಂಡು ನನ್ನನ್ನು ನುಂಗುವುದಕ್ಕೆ ಸಿದ್ಧವಾಗಿ ಬರುತ್ತಿತ್ತು.

ಏನು ಮಾಡಲಿ? ಹಿಂದೆ ಸಿಂಹ! ಮುಂದೆ ಮೊಸಳೆ! ಬಲಗಡೆ ಆಳವಾದ ಕೊಳ! ಎಡಗಡೆ ನೋಡಿದರೆ, ಅಡಿಯೇ ಕಾಣದಷ್ಟು ಆಳವಾದ ಕಮರಿ! ಪ್ರಪಾತ! ಆಗ ಬೇರೆ ಏನು ಮಾಡುವುದಕ್ಕೂ ತೋಚದೆ, 'ದೇವರೇ ಗತಿ!' ಎಂದುಕೊಂಡು, ದೊಪ್ಪನೆ ನೆಲದ ಮೇಲೆ ಮುಖ ಅಡಿಯಾಗಿ ಬಿದ್ದುಕೊಂಡುಬಿಟ್ಟೆ.



ಆಗ ಕತ್ತಿಯನ್ನು ಮೇಲೆತ್ತಿದೆ

ಅದೆಷ್ಟು ಹೊತ್ತು ಹಾಗೆ ಬಿದ್ದಿದ್ದೆನೋ ನನಗೆ ಜ್ಞಾಪಕ ವಿಲ್ಲ. ನನ್ನ ಹತ್ತಿರ ಎಲ್ಲಿಯೋ ಯಾವುದೋ ವಿಚಿತ್ರವಾದ ಶಬ್ದ, ಗಂಟಲಿನಲ್ಲಿ ಏನಾದರೂ ಸಿಕ್ಕಿಕೊಂಡಾಗ ನುಂಗುವುದಕ್ಕಾಗದೆ ಮಾಡುವ ಶಬ್ದ ಕೇಳಿಬಂದಿತು. ಆಗ ಎದ್ದು ನೋಡಿದರೆ, ಸಿಂಹದ ತಲೆ ಮೊಸಳೆಯ ಬಾಯಲ್ಲಿ ಬಲವಾಗಿ ಸಿಕ್ಕಿಕೊಂಡಿತ್ತು. ನನ್ನನ್ನು ನುಂಗಬೇಕೆಂದು ಎದುರಿಗೆ ಮೊಸಳೆ ಬಾಯಿ ತೆರೆದುಕೊಂಡು ಬರುತ್ತಿದ್ದಾಗ, ನನ್ನನ್ನು ತಿನ್ನಬೇಕೆಂದು ಎದುರು ದಿಕ್ಕಿನಿಂದ ಬರುತ್ತಿದ್ದ ಸಿಂಹ ನನ್ನಮೇಲೆ ಹಾರಿರಬೇಕು; ಅದೇ ಸಮಯದಲ್ಲಿ ನಾನು ದಪಕ್ಕನೆ ಕೆಳಗೆ ಮಲಗಿದುದರಿಂದ ಸಿಂಹ ತನ್ನ ಆಯ ತಪ್ಪಿ ನೆಗೆದು, ಅದರ ತಲೆ ಮೊಸಳೆಯ ಬಾಯೊಳಕ್ಕೆ ಸಿಕ್ಕಿರಬೇಕು. ಅಂತೂ ಸಿಂಹ ತನ್ನ ತಲೆಯನ್ನು ಬಿಡಿಸಿಕೊಳ್ಳಲಾರದೆ ಗಂಟಲ ಲ್ಲಿಯೇ ಗೊರ್ರೆನ್ನುತ್ತಿತ್ತು; ಮೊಸಳೆ ಅದರ ತಲೆಯನ್ನು ಬಿಡಲು ಒಲ್ಲದೆ ತಾನೂ ಗುರ್ರೆನ್ನುತ್ತಿತ್ತು.

ಆಗ ನಾನು 'ದೇವರೇ ನನ್ನನ್ನು ಕಾಪಾಡಿದ'ನೆಂದುಕೊಂಡು ಎದ್ದು, ಕೆಳಗೆ ಬಿದ್ದಿದ್ದ ಕತ್ತಿಯನ್ನು ಎತ್ತಿಕೊಂಡು ಒಂದೇ ಏಟಿಗೆ ಸಿಂಹದ ಕುತ್ತಿಗೆಯನ್ನು ಕತ್ತರಿಸಿಬಿಟ್ಟೆ. ಸಿಂಹ ಸತ್ತು, ಅದರ ದೇಹ ನನ್ನ ಕಾಲಿನ ಬಳಿ ಬಿತ್ತು. ಕತ್ತರಿಸಿ ಹೋದ ಸಿಂಹದ ತಲೆ ಯನ್ನು ಮೊಸಳೆ ಒಂದೇ ತುತ್ತಿಗೆ ನುಂಗಲು ಯತ್ನಿಸಿದಾಗ ಅದು ಗಂಟಲಲ್ಲಿ ಸಿಕ್ಕಿಕೊಂಡಿತು. 'ಇದೇ ಸಮಯ' ಎಂದು ನಾನು ನನ್ನ ಬಂದೂಕದ ಹಿಂಭಾಗದಿಂದ ಹೊಡೆದು ಆ ತಲೆಯನ್ನು ಇನ್ನೂ ಒಳಕ್ಕೆ ತುರುಕಿದೆ. ಮೊಸಳೆ ಉಸಿರು ಕಟ್ಟಿಕೊಂಡು ಅಲ್ಲೇ ಸತ್ತುಹೋಯಿತು. ಹೀಗೆ ನನ್ನನ್ನು ನಾಶಮಾಡಬೇಕೆಂದು ಬಂದ ಎರಡು ದುಷ್ಟಜಂತುಗಳೂ ಒಂದು ಒಂದರ ಕೈಯಿಂದ ತಾವಾಗಿಯೇ ನಾಶವಾದುವು.

ಆ ವೇಳೆಗೆ ನನ್ನ ಚಿಕ್ಕಪ್ಪನ ಮಗ ನನ್ನನ್ನು ಹುಡುಕಿಕೊಂಡು ಬಂದ. ಇಬ್ಬರೂ ಸೇರಿ ಆ ಸಿಂಹದ ಚರ್ಮವನ್ನು ಸುಲಿದೆವು. ಆ ವೇಳೆಗೆ ಊರಿನಿಂದ ನಮಗೋಸ್ಕರ ಗಾಡಿ ಬಂದಿತ್ತು. ಮೊಸಳೆಯನ್ನು ಅದರ ಮೇಲೆ ಮನೆಗೆ ಸಾಗಿಸಿಕೊಂಡು ಹೋಗಿ, ಅದರ ಒಳಗಿನ ರಕ್ತ ಮಾಂಸವನ್ನೆಲ್ಲಾ ತೆಗೆದು, ಹತ್ತಿಯನ್ನು ತುಂಬಿ, ನಿಜವಾದ ಮೊಸಳೆಯ ಹಾಗೆಯೇ ಮಾಡಿಟ್ಟೆವು. ಸಿಂಹದ ಚರ್ಮದಿಂದ ಎಂಟು ಹತ್ತು ಹೊಗೆಸೊಪ್ಪಿನ ಚೀಲಗಳನ್ನು ಮಾಡಿದೆವು.

ಹಾಲೆಂಡಿಗೆ ಹಿಂದಿರುಗಿದಮೇಲೆ, ಅಲ್ಲಿನ ಸಾಹುಕಾರರು ಕೆಲವರು ಆ ಚೀಲಗಳನ್ನು ಸಾವಿರಾರು ಚಿನ್ನದ ನಾಣ್ಯ ಕೊಟ್ಟು ಕೊಂಡುಕೊಂಡರು. ವಸ್ತುಸಂಗ್ರಹಾಲಯದವರು ನನ್ನ ಹತ್ತಿ ತುಂಬಿದ ಮೊಸಳೆಯನ್ನು ತಾವು ಕೊಂಡುಕೊಂಡು ಅಲ್ಲಿ ಪ್ರದರ್ಶನಕ್ಕೆ ಇಟ್ಟಿದ್ದಾರೆ. ಯಾರಾದರೂ ಬಂದರೆ, ಅವರಿಗೆ ಅದರ ಕಥೆ ಹೇಳುತ್ತಾರೆ. ಕೆಲವು ಸಲ ಆ ಕಥೆಗೆ ಬಣ್ಣ ಕಟ್ಟುತ್ತಾರೆ, ಮೂಲಕ್ಕೆ ಇಲ್ಲದ ರೆಕ್ಕೆಪುಕ್ಕಗಳನ್ನು ಜೋಡಿಸುತ್ತಾರೆ. ಉದಾಹರಣೆಗೆ “ಸಿಂಹ ಮೊಸಳೆಯ ಬಾಯಿಗೆ ಹಾರಿ, ಬಾಲದ ಕಡೆಯಿಂದ ಓಡಿಹೋಗುತ್ತಿದ್ದಾಗ ನಮ್ಮ ಬ್ಯಾರನ್ ಒಂದೇ ಏಟಿಗೆ ಸಿಂಹದ ಕತ್ತು ಕತ್ತರಿಸಿದ. ಹಾಗೆ ಕತ್ತರಿಸುವಾಗ ಮೊಸಳೆಯ ಬಾಲ ಕೂಡ ಇಷ್ಟು ಉದ್ದ ಕತ್ತರಿಸಿ ಹೋಯಿತು. ನಾವು ಹೊಸದಾಗಿ ತೇಪೆ ಹಾಕಿದ್ದೇವೆ” ಎನ್ನುತ್ತಾರೆ. ಇನ್ನೂ ಒಂದೊಂದು ಸಲ “ಮೊಸಳೆ ತನ್ನ ಬಾಲ ಕತ್ತರಿಸಿ ಹೋಯಿತಲ್ಲಾ ಎಂಬ ರೋಷದಿಂದ ನಮ್ಮ ಬ್ಯಾರನ್ನಿನ ಕೈಯಲ್ಲಿದ್ದ ಕತ್ತಿಯನ್ನು ಕಿತ್ತುಕೊಂಡು ನುಂಗಿಬಿಟ್ಟಿತು. ಆ ನುಂಗಿದ ಕತ್ತಿಯ ಮೊನೆ ಅದರ ಎದೆಗೆ ಚುಚ್ಚಿಕೊಂಡು ಅದು ಸತ್ತುಹೋಯಿತು” ಎನ್ನುತ್ತಾರೆ.

ಕೆಲವು ಜನರಿಗಂತೂ ಸುಳ್ಳು ಹೇಳುವುದು ಎಂದರೆ ಲಕ್ಷ್ಯವೇ ಇಲ್ಲ. ನೀರು ಕುಡಿದಷ್ಟು ಸುಲಭ. ಆದರೂ ಕೇಳಿದ ಜನ ಅದನ್ನು ನಂಬುತ್ತಾರೆಯೇ ಹೊರತು ನಾನು ನಿಜ ಹೇಳಿದರೆ ಮಾತ್ರ 'ಬಿಡುತಾನೆ ಬುರುಡೆ!' ಎಂದು ನಗುತ್ತಾರೆ. ಏನು ಮಾಡುವುದು ?

## ತೋಳ ಕುದುರೆಯಾದದ್ದು

ಒಂದು ಸಲ ನಾನು ಇಟಲಿ ದೇಶದಿಂದ ರಷ್ಯಾದೇಶಕ್ಕೆ ಹೋಗಬೇಕಾಯಿತು. ಆಗ ಚಳಿಗಾಲ. ದಾರಿಯ ಉದ್ದಕ್ಕೂ ತುಂಬ ಹಿಮ, ಮಂಜು. ನಡೆಯುವುದು ಕಷ್ಟವೆಂದು ಕುದುರೆಯನ್ನು ಏರಿಹೋದೆ. ಚಳಿಗಾಲವಾದುದರಿಂದ ಮೈ ಮುಚ್ಚುವಂತೆ ನಾಲ್ಕಾರು ಅಂಗಿಗಳನ್ನು ತೊಟ್ಟು ಒಂದು ದಪ್ಪವಾದ ಉಣ್ಣೆಯ ನಿಲುವಂಗಿಯನ್ನು ಹಾಕಿಕೊಂಡಿದ್ದೆ. ಪೋಲೆಂಡ್ ದೇಶವನ್ನು ನಾನು ಸಮೀಪಿಸುತ್ತಿರುವಾಗ ಬಟ್ಟೆಯೇ ಇಲ್ಲದೆ ಬೆತ್ತಲೆಯಾದ ಬಡವನೊಬ್ಬನು ಚಳಿಯಲ್ಲಿ ನಡುಗುತ್ತ ಬಿದ್ದುಕೊಂಡಿದ್ದ. ಅವನ ಅವಸ್ಥೆಯನ್ನು ಕಂಡು ನನಗೆ ತುಂಬ ಮರುಕವಾಯಿತು. ನನ್ನ ಉಣ್ಣೆಯ ನಿಲುವಂಗಿಯನ್ನೇ ತೆಗೆದು ಅವನ ಮೈಗೆ ಹೊದಿಸಿದೆ. ಆಗ ಆಕಾಶದಿಂದ ಯಾವುದೋ ಧ್ವನಿ "ನಿನ್ನ ಧರ್ಮವನ್ನು ದೇವರು ಮೆಚ್ಚಿದ್ದಾನೆ. ಇದರಿಂದ ನಿನಗೆ ಕಷ್ಟಕಾಲದಲ್ಲಿ ಅನುಕೂಲವಾಗುತ್ತದೆ" ಎಂದು ನನ್ನನ್ನು ಆಶೀರ್ವದಿಸಿತು.

ಹಾಗೆಯೇ ಮುಂದೆ ಹೋಗುತ್ತಿರುವಾಗ ರಾತ್ರಿಯಾಯಿತು, ಕತ್ತಲು ಕವಿದುಕೊಂಡಿತು. ಹತ್ತಿರ ಯಾವುದೂ ಹಳ್ಳಿ ಕಾಣಿಸಲಿಲ್ಲ. ಸುತ್ತ ಬರಿಯ ಮಂಜು ಕವಿದುಕೊಂಡು ದಾರಿಯೂ ಮುಚ್ಚಿಹೋಗಿತ್ತು. ನನಗೋ ಬಹಳ ಆಯಾಸವಾಗಿತ್ತು. ಕುದುರೆ

ಯಿಂದ ಇಳಿದು, ಅದನ್ನು ಪಕ್ಕದಲ್ಲಿದ್ದ ಒಂದು ಕಲ್ಲಿನ ಗೂಟಕ್ಕೆ ಕಟ್ಟಿಹಾಕಿ, ನನ್ನ ಪಿಸ್ತೂಲುಗಳನ್ನು ಪಕ್ಕದಲ್ಲಿಟ್ಟುಕೊಂಡು, ಅಲ್ಲೇ ಕುದುರೆಯ ಮಗ್ಗುಲಲ್ಲಿ ಮಂಜಿನಮೇಲೆ ಮಲಗಿಕೊಂಡು ನಿದ್ರೆಮಾಡಿದೆ. ಬೆಳಗಾಗುವವರೆಗೆ ನನಗೆ ಎಚ್ಚರವೇ ಆಗಲಿಲ್ಲ. ಎಚ್ಚರವಾದಾಗ ಕಣ್ಣುಬಿಟ್ಟು ನೋಡಿದರೆ, ನಾನು ಯಾವುದೋ ಹಳ್ಳಿಯ ನಡುವೆ ಮಲಗಿದ್ದೇನೆ; ಸುತ್ತಲೂ ಸಮಾಧಿಯ ಕಲ್ಲು ಗಳಿವೆ; ಪಕ್ಕದಲ್ಲಿ ಒಂದು ಕ್ರೈಸ್ತ ದೇವಾಲಯವಿದೆ; ನನ್ನ ಕುದುರೆ ಮಾತ್ರ ಎಲ್ಲೂ ಕಾಣಿಸಲಿಲ್ಲ. 'ಇದೇನಿದು ಆಶ್ಚರ್ಯ!' ಎಂದು ನಾನು ಕಣ್ಣು ಹೊಸಗಿಕೊಳ್ಳುತ್ತಿರುವಾಗಲೇ ಎಲ್ಲಿಯೋ ಮೇಲುಗಡೆಯಿಂದ ಕುದುರೆ ಕೆನೆದ ಶಬ್ದ ಕೇಳಿಬಂತು. ತಲೆ ಎತ್ತಿ ನೋಡಿದರೆ, ಪಕ್ಕದ ಕ್ರೈಸ್ತದೇವಾಲಯದ ಗೋಪುರದ ತುದಿಯಲ್ಲಿ ನನ್ನ ಕುದುರೆ ಕಟ್ಟಿಬಿದ್ದು ಒದ್ದಾಡುತ್ತಿದೆ! ಆಗ ನನಗೆ ಅರ್ಥವಾಯಿತು: ರಾತ್ರಿಯೆಲ್ಲ ಹಿಮಬಿದ್ದು ಆ ದೇವಸ್ಥಾನ ಗೋಪುರ ಸಮೇತ ಹಿಮದಲ್ಲಿ ಹೂತುಹೋಗಿತ್ತು; ನಾನು ತಿಳಿ ಯದೆ ಗೋಪುರವನ್ನೇ ಗೂಟವೆಂದುಕೊಂಡು ಕುದುರೆಯನ್ನು ಕಟ್ಟಿದ್ದೆ; ಹಗಲಾಗುತ್ತ ಹಿಮ ಕರಗಿಹೋಗಿ, ನಾನು ಕೆಳಗಿಳಿದು ನೆಲಕ್ಕೆ ಬಂದಿದ್ದೆ, ನನ್ನ ಕುದುರೆ ಮಾತ್ರ ಇನ್ನೂ ಹಾಗೇ ಮೇಲೆಯೇ ಇತ್ತು. "ಅದೇನೋ ಸರಿಯೆ. ಆದರೆ ಕುದುರೆಯನ್ನು ಬಿಚ್ಚುವುದು ಹೇಗೆ?" ಎಂದುಕೊಂಡು, ನನ್ನ ಪಿಸ್ತೂಲಿನಿಂದ ಕುದುರೆಯನ್ನು ಕಟ್ಟಿದ ಹಗ್ಗಕ್ಕೆ ಹೊಡೆದು, ಕುದುರೆಯನ್ನು ಕೆಳಗಿಳಿಸಿ, ಮುಂದಕ್ಕೆ ಹೋದೆ.

ಆದರೆ ಒಂದು ವಿಷಯ ಮಾತ್ರ, ನಾನು ಒಪ್ಪಿಕೊಳ್ಳಬೇಕು. ಈಗ ನೆನೆದುಕೊಂಡರೂ ನನಗೆ ನಾಚಿಕೆಯಾಗುತ್ತದೆ. ಅದೇನೆಂದರೆ, ರಾತ್ರಿಯೆಲ್ಲ ಕಟ್ಟಿಹಾಕಿದ್ದ ಕುದುರೆಗೆ ಬೆಳಗ್ಗೆ ಒಂದು ಹಿಡಿ ಹುರುಳಿ

ಕೂಡ ತಿನ್ನಿಸದೆ, ಮರೆತು, ಹಾಗೆಯೇ ಅದನ್ನು ಹತ್ತಿಕೊಂಡು ಹೋದೆ.

ರಷ್ಯಕ್ಕೆ ಬಂದ ಮೇಲೆ ಮಾತ್ರ ನಾನು ಕುದುರೆಯೇರುವುದನ್ನು ಬಿಟ್ಟು, ರಷ್ಯಾದಲ್ಲಿ ಪ್ರಚಾರದಲ್ಲಿರುವ 'ಸ್ಲೆಡ್ಜ್' ಎಂಬ ಹಿಮದ ಗಾಡಿಯನ್ನು ಉಪಯೋಗಿಸತೊಡಗಿದೆ. ಒಂದು ಸಲ ಅಂಥ ಗಾಡಿಗೆ ಕುದುರೆಯನ್ನು ಕಟ್ಟಿಕೊಂಡು ಓಡಿಸುತ್ತಿದ್ದೇನೆ. ಸೆಯಿಂಟ್ ಪೀಟರ್ಸ್‌ಬರ್ಗ್ ನಗರದ ಹೊರಗಿನ ಕಾಡುಗಳಲ್ಲಿ ಬರುತ್ತಿರುವಾಗ ನಮ್ಮ ಗಾಡಿಯ ಹಿಂದೆ ಒಂದು ಭಯಂಕರವಾದ ತೋಳ ಬರುತ್ತಿದ್ದುದನ್ನು ಕಂಡೆ. ಹೀಗೆ ತೋಳಗಳು ಬಂದು ಮನುಷ್ಯರನ್ನೂ ಕುದುರೆಗಳನ್ನೂ ಕೊಂದು ತಿನ್ನುವುದು ಆ ದೇಶದಲ್ಲಿ ಬಹಳ ಸಾಮಾನ್ಯ. ನಾನೂ ಮರಣಭಯದಿಂದ ನನ್ನ ಕುದುರೆಯನ್ನು ಆದಷ್ಟು ವೇಗವಾಗಿ ಓಡಿಸಿದೆ. ಆದರೆ ತೋಳ ಹೆಚ್ಚು ಹೆಚ್ಚು ಹತ್ತಿರ ಬರುತ್ತಿದ್ದುದನ್ನು ಕಂಡು, ನಾನು 'ದೇವರು ಮಾಡಿದ ಹಾಗಾಗಲಿ' ಎಂದುಕೊಂಡು ಗಾಡಿಯಲ್ಲಿ ಹಾಗೇ ಬಗ್ಗಿ ಮಲಗಿಕೊಂಡೆ. ನಾನು ಎಣಿಸಿಕೊಂಡಿದ್ದ ಹಾಗೆಯೇ ತೋಳ ನನ್ನ ಮೇಲೆ ನೆಗೆದು ಕುದುರೆಯ ಬೆನ್ನ ಮೇಲೆ ಕಚ್ಚಿಕೊಂಡಿತು. ಕುದುರೆ ಜೀವಭಯದಿಂದ ಹುಚ್ಚುಹುಚ್ಚಾಗಿ ಓಡಿತು. ಹತ್ತು ಹೆಜ್ಜೆ ಓಡುವುದರೊಳಗಾಗಿ ತೋಳ ಕುದುರೆಯ ಹಿಂಭಾಗದ ಅರ್ಧವನ್ನೆಲ್ಲಾ ಗಬಗಬನೆ ನುಂಗಿ, ಮುಂಭಾಗಕ್ಕೆ ಮೂತಿಯಿಟ್ಟಿತ್ತು. ಅದೇ ಸಮಯದಲ್ಲಿ ನಾನು ಕೈಯಲ್ಲಿದ್ದ ಚಾವಟಿಯಿಂದ ತೋಳದ ಬೆನ್ನಿಗೆ ಒಂದು ಬಿಟ್ಟೆ. ತೋಳ ಬೆಚ್ಚಿ ಮುಂದೆ ನುಗ್ಗಿತು. ಹಾಗೆ ನುಗ್ಗಿದ ಜೋರಿಗೆ ಕುದುರೆಯ ಸತ್ತ ದೇಹ ಕಳಚಿಕೊಂಡು ಕೆಳಗೆ ಬಿದ್ದು, ಕುದುರೆಯ ಸ್ಥಾನದಲ್ಲಿ ತೋಳ ಕಟ್ಟುಗಳಿಗೆ ಸಿಕ್ಕಿಕೊಂಡಿತು. ನಾನು ಅದನ್ನು ಹಾಗೇ

ಓಡಿಸಿಕೊಂಡು ಸೆಯಿಂಟ್ ಪೀಟರ್ಸ್‌ಬರ್ಗಿಗೂ ಬಂದೆ. ಕ್ರೂರ ಪ್ರಾಣಿಯಾದ ತೋಳ ಕುದುರೆಯ ಹಾಗೆ ಹಿಮದ ಗಾಡಿಯನ್ನು ಎಳೆದುಕೊಂಡು ಬಂದುದನ್ನು ನೋಡಿ ಆ ಊರಿನವರೆಲ್ಲ ತುಂಬ ಆಶ್ಚರ್ಯಪಟ್ಟರು.

## ಕಣ್ಣಿನಿಂದ ಕಿಡಿ ಕಾರಿದ್ದು

ನಾನು ರಷ್ಯದಲ್ಲಿದ್ದಾಗ ಒಬ್ಬ ದೊಡ್ಡಮನುಷ್ಯರ ಬಂಗಲೆಯಲ್ಲಿದ್ದೆ. ಅಲ್ಲಿ ನನ್ನ ಕೊಠಡಿಯ ಹೊರಗಡೆ ಇದ್ದ ವಿಶಾಲವಾದ ಸರೋವರದಲ್ಲಿ ಕಾಡುಬಾತುಗಳು ಬೇಕಾದಹಾಗೆ ಇದ್ದುವು. ಒಂದುದಿನ ಬೆಳಗ್ಗೆ ಅಲ್ಲಿ ಎರಡು ಬಲಿತ ಬಾತುಗಳನ್ನು ಕಂಡೆ. ಅವುಗಳನ್ನು ಬೇಟೆಯಾಡಬೇಕೆಂದು ಬಂದೂಕವನ್ನು ಕೈಗೆತ್ತಿಕೊಂಡು ಅವಸರವಾಗಿ ಹೊರಟಾಗ, ಬಾಗಿಲವಾಡಕ್ಕೆ ನನ್ನ ಮೂಗು ತಗಲಿತು. ತಗಲಿದ ಜೋರಿಗೆ ಕಣ್ಣುಗಳಿಂದ ಕಿಡಿ ಸಿಡಿಯಿತು. ಅದರಲ್ಲಿ ಒಂದು ಕಿಡಿ ಪಕ್ಕದಲ್ಲಿದ್ದ ಮೇಜಿನಮೇಲೆ ಬಿದ್ದು, ಅದರ ಮರ ಅಂಗೈಯ ಅಗಲ ಸುಟ್ಟುಹೋಯಿತು.

ನಾನು ಕೆಳಗೆ ಹೋಗುವ ವೇಳೆಗೆ ಕಾಡುಬಾತುಗಳು ಎದ್ದು ಹಾರುತ್ತಿದ್ದುವು. ಬಂದೂಕನ್ನು ಬೇಗ ಹೆಗಲಿಗೆ ಎತ್ತಿ ಗುರಿಯಿಟ್ಟೆ. ಆದರೆ ಬಾಗಿಲವಾಡಕ್ಕೆ ನಾನು ಢಿಕ್ಕಿ ಹೊಡೆದಾಗ, ನನ್ನ ಬಂದೂಕದ ಕುದುರೆ ಕಿತ್ತುಹೋಗಿತ್ತು. ಬರುವ ಅವಸರದಲ್ಲಿ ನಾನು ಮದ್ದನ್ನು ಸುಡುವುದಕ್ಕೆ ಬೇಕಾದ ಕೇಪನ್ನು ಮರೆತು ಬಂದಿದ್ದೆ. ಪುನಃ ಹಿಂದಿರುಗಿ ಹೋಗಿ ಬರುವುದಕ್ಕೆ ಸಮಯವಿರಲಿಲ್ಲ. ಬಂದೂಕದ ನಳಿಗೆಯಲ್ಲಿ ಮದ್ದು ಗುಂಡು ಹಾಕಿ, ಗುರಿಯಿಟ್ಟು, ಎಡಮುಷ್ಟಿಯಿಂದ ಮೂಗಿನ ಮೇಲೆ ಬಲವಾಗಿ ಒಂದು ಗುದ್ದು ಕೊಟ್ಟೆ. ಕಣ್ಣುಗಳಿಂದ ಕಿಡಿ ಹಾರಿತು. ಅದರಲ್ಲಿ

ಒಂದು ಕಿಡಿ ಮದ್ದಿಗೆ ತಗುಲಿ, ಆದರಿಂದ ಗುಂಡು ಸಿಡಿದು, ಆಕಾಶ ದಲ್ಲಿ ಹಾರುತ್ತಿದ್ದ ಹದಿನೈದು ಬಾತುಗಳನ್ನೂ ಇಪ್ಪತ್ತೈದು ಇತರ ಹಕ್ಕಿಗಳನ್ನೂ ಕೊಂದು ಕೆಳಕ್ಕೆ ಕೆಡವಿತು.

ಅದೇ ರಷ್ಯದಲ್ಲಿ ಹೀಗೇ ಇನ್ನೊಂದು ಸಲ ಬಂದೂಕ ಹಿಡಿದು ಬೇಟೆಗಾಗಿ ಕಾಡಿಗೆ ಹೋದೆ. ಎದುರಿಗೆ ಒಂದು ಮರದ ಹತ್ತಿರ ಒಂದು ನರಿ ನಿಂತಿತ್ತು. ಅದರ ಚರ್ಮ ತುಂಬ ಸುಂದರ ವಾಗಿತ್ತು. ಬಂದೂಕದಿಂದ ಆದನ್ನು ಹೊಡೆದರೆ ಅನ್ಯಾಯವಾಗಿ ಚರ್ಮ ಕೆಟ್ಟುಹೋಗುತ್ತದೆ ಎಂದುಕೊಂಡು, ಒಂದು ಉಪಾಯ ಮಾಡಿದೆ. ಕೈಯಲ್ಲಿದ್ದ ಬಂದೂಕಕ್ಕೆ ಮದ್ದು ತುಂಬಿ, ಅದರ ಮುಂದೆ ಒಂದು ಮೊಳೆಯನ್ನು ಇಟ್ಟು, ಬಂದೂಕ ಹಾರಿಸಿದೆ. ಮೊಳೆ ಹಾರಿ, ನರಿಯ ಬಾಲವನ್ನು ತಾಕಿ, ಅದನ್ನು ಮರಕ್ಕೆ ಜೋಡಿಸಿ ಹಿಡಿಯಿತು. ನರಿ ತಪ್ಪಿಸಿಕೊಳ್ಳಲಾಗದಂತೆ ಸಿಕ್ಕಿಬಿದ್ದು ದನ್ನು ಕಂಡು, ನಾನು ಹತ್ತಿರ ಹೋಗಿ, ಕೈಯಲ್ಲಿದ್ದ ಚಾವಟಿ ಯಿಂದ ನಾಲ್ಕು ಏಟು ಬಿಗಿದೆ. ನನ್ನ ಏಟುಗಳನ್ನು ತಡೆಯು ಲಾರದೆ ನರಿಯ ಜೀವ ಅದರ ದೇಹವನ್ನು ಬಿಟ್ಟು ಓಡಿ ಹೋಯಿತು. ನನಗಂತೂ ಬಹಳ ಒಳ್ಳೆಯ ನರಿಯ ಚರ್ಮ ದೊರಕಿತು.

ಕೆಲವು ಸಲ ನಾವು ತಪ್ಪುಮಾಡಿದರೂ ನಮ್ಮ ಅದೃಷ್ಟ ನಮ್ಮನ್ನು ಕೈಬಿಡದೆ ಕಾಪಾಡುತ್ತದೆ. ಉದಾಹರಣೆಗೆ, ಒಂದು ಸಲ ನಾನು ಕಾಡಿನೊಳಗೆ ಹೋಗುತ್ತಿರುವಾಗ ಎರಡು ಕಾಡು ಹಂದಿಗಳನ್ನು ಕಂಡೆ. ಹಿಂದುಗಡೆಯದು ಮುದಿ, ಮುಂದುಗಡೆ ಯದಕ್ಕೆ ಇನ್ನೂ ಚಿಕ್ಕ ಪ್ರಾಯ. ಮುದಿಹಂದಿ ಪ್ರಾಯದ ಹಂದಿಯ ಬಾಲವನ್ನು ಬಾಯಲ್ಲಿ ಕಚ್ಚಿಕೊಂಡು ಅದನ್ನು ಹಿಂಬಾಲಿಸುತ್ತಿತ್ತು. ನಾನು 'ಈ ದಿನ ಎರಡು ಹಂದಿ ನನಗೆ

ಸಿಕ್ಕಿತು' ಎಂದುಕೊಂಡು ಸಂತೋಷದಿಂದ ಬಂದೂಕವನ್ನು ಗುರಿಯಿಟ್ಟು ಹೊಡೆದೆ. ನನ್ನ ಗುರಿ ಏಕೋ ತಪ್ಪಿ ಹೋಗಿ, ಮುಂದಿನ ಹಂದಿಯ ಬಾಲವನ್ನು ಮಾತ್ರ ಕತ್ತರಿಸಿತು. ಮುಂದಿದ್ದ ಹಂದಿ ಹೆದರಿಕೊಂಡು ಓಡಿಹೋಯಿತು. ಹಿಂದಿದ್ದ ಹಂದಿ ಮಾತ್ರ, ಕತ್ತರಿಸಿದ ಬಾಲವನ್ನು ಹಾಗೇ ಕಚ್ಚಿಕೊಂಡು ಅಲ್ಲೇ ನಿಂತಿತ್ತು. ನಾನು ಹತ್ತಿರ ಹೋದಾಗಲೂ ಅದು ಚಲಿಸಲಿಲ್ಲ. ಇದೇನು ವಿಚಿತ್ರ ಎಂದು ನೋಡಿದರೆ, ಆ ಮುದಿಹಂದಿಗೆ ಕಣ್ಣು ಕುರುಡು! ಆದ್ದರಿಂದಲೇ ದಾರಿ ಸರಿಯಾಗಿ ಕಾಣುವುದಿಲ್ಲವೆಂದು ಇನ್ನೊಂದು ಹಂದಿಯ ಬಾಲವನ್ನು ಕಚ್ಚಿಕೊಂಡು ಅದು ಹೋದ ಕಡೆ ಹೋಗುತ್ತಿತ್ತು. ಈಗ ಆ ಬಾಲ ನಿಂತುಬಿಟ್ಟದ್ದರಿಂದ ತಾನೂ ನಿಂತುಬಿಟ್ಟಿತ್ತು. ಸರಿ, ನಾನೇನು ಮಾಡಲಿ? ಕತ್ತರಿಸಿ ಹೋದ ಆ ಬಾಲವನ್ನು ಕೈಯಲ್ಲಿ ಹಿಡಿದು ನಡೆದೆ. ಮುದಿಹಂದಿ ಮುಂದಿನ ಹಂದಿಯೇ ತನ್ನನ್ನು ನಡೆಯಿಸಿಕೊಂಡು ಹೋಗುತ್ತಿದೆ ಎಂದುಕೊಂಡು ಸ್ವಲ್ಪವೂ ತೊಂದರೆ ಮಾಡದೆ ನಾಯಿಮರಿಯ ಹಾಗೆ ನನ್ನ ಹಿಂದೆಯೇ ಬಂತು. ಮನೆಗೆ ಬಂದಮೇಲೆ, ನಾವು ಅದನ್ನು ತಿಂದು ಮುಗಿಸಿಬಿಟ್ಟೆವು. ನಮಗೆ ಹಂದಿಯ ಮಾಂಸವೆಂದರೆ ನಿಮಗೆ ಹಲಸಿನಹಣ್ಣು ಇದ್ದಹಾಗೆ.

ಕಾಡುಹಂದಿಗಳ ವಿಷಯ ಹೇಳುತ್ತಿರುವಾಗಲೇ ಇನ್ನೊಂದು ಕತೆಯನ್ನೂ ಹೇಳಿಬಿಡುತ್ತೇನೆ. ಈ ಕಾಡುಹಂದಿಗಳು ಮಹಾ ಭಯಂಕರವಾದ ಪ್ರಾಣಿಗಳು, ಕೆಂಡದಂಥ ಕೋಪ. ಅವು ಕಣ್ಣು ಮುಚ್ಚಿಕೊಂಡು ನುಗ್ಗಿ ಸೀಳಿಬಿಡುವುದಕ್ಕೆ ತಮ್ಮ ಕೋರೆ ದಾಡೆಗಳನ್ನು ಸದಾ ಸಿದ್ಧಪಡಿಸಿಕೊಂಡಿರುತ್ತವೆ. ಇಂಥ ಒಂದು ಕಾಡುಹಂದಿ ಒಂದು ಸಲ ನನಗೆ ಕಾಡಿನಲ್ಲಿ ಎದುರಾಯಿತು. ಆ ಸಲವೂ ನನ್ನ ಅದೃಷ್ಟಕ್ಕೆ ಸರಿಯಾಗಿ ನನ್ನ ಕೈಯಲ್ಲಿ ಬಂದೂಕ

ಏರಲಿಲ್ಲ. ಹಂದಿ ನನ್ನನ್ನು ಕಂಡು, ನನ್ನ ಕಡೆಗೆ ನುಗ್ಗಿದೊಡನೆಯೇ ನಾನು ನನ್ನ ಹಿಂದೆ ಇದ್ದ ಒಂದು ದೊಡ್ಡ ಮರದ ಹಿಂದೆ ಅವಿತುಕೊಂಡೆ. ಹಂದಿ ಕಣ್ಣು ಮುಚ್ಚಿಕೊಂಡು ಬಂದ ರಭಸದಲ್ಲಿ ಆ ಮರಕ್ಕೆ ಢಿಕ್ಕಿ ಹೊಡೆಯಿತು. ಅದರ ಚೂಪಾದ ಕೋರೆ ಹಲ್ಲು ಮರದ ಈಕಡೆ ಹೊಕ್ಕು ಆಕಡೆ ಹೊರಗೆ ಬಂತು. ನಾನೂ ಥಟಕ್ಕನೆ ನೆಲದ ಮೇಲಿದ್ದ ಕಲ್ಲೊಂದನ್ನು ಎತ್ತಿಕೊಂಡು, ಅದರ ಹಲ್ಲಿನ ತುದಿಗೆ ಹೊಡೆದೂ ಹೊಡೆದೂ ಅದನ್ನು ಬಗ್ಗಿಸಿಬಿಟ್ಟೆ. ಹಂದಿ ತನ್ನ ಕೋರೆದಾಡೆಯಿಂದಲೇ ಮರಕ್ಕೆ ಸಿಕ್ಕಿಬಿತ್ತು. ಆ ಮೇಲೆ ನಾನು ನಿದಾನವಾಗಿ ಊರಿಗೆ ಹೋಗಿ, ಅಲ್ಲಿಂದ ಹಗ್ಗವನ್ನೂ ಗಾಡಿಯನ್ನೂ ತಂದು, ಆ ಹಂದಿಯನ್ನು ಸಾಗಿಸಿಕೊಂಡು ಹೋದೆ.

## ಚೆರಿಹಣ್ಣಿನ ಜಿಂಕೆ

ಅನೇಕ ಸಲ ನನಗೆ ಅದೃಷ್ಟ ಅನುಕೂಲವಾಗಿದೆಯೆಂದು ಹಿಂದೆಯೇ ಹೇಳಿದ್ದೇನೆ. ಅದಕ್ಕೆ ಇನ್ನೊಂದು ಉದಾಹರಣೆ ಹೇಳುತ್ತೇನೆ, ಕೇಳಿ.

ಒಂದು ಸಲ ಎಂದಿನ ಹಾಗೆಯೇ ಬೇಟೆಗೆ ಹೋಗಿ, ತೆಗೆದುಕೊಂಡು ಹೋಗಿದ್ದ ಮದ್ದು ಗುಂಡುಗಳೆಲ್ಲಾ ಮುಗಿದು ಮನೆಗೆ ಬರುವಾಗ ಎದುರಿಗೆ ಒಂದು ಸೊಗಸಾದ ಜಿಂಕೆಯನ್ನು ನೋಡಿದೆ. ಏನು ಎತ್ತರ! ಎಷ್ಟು ದಪ್ಪ! ಕೊಂಬು ಎಷ್ಟು ವಿಶಾಲ! ಆದರೆ, ಅನ್ಯಾಯ, ಏನು ಮಾಡುವುದು? ಮದ್ದಿಲ್ಲ, ಗುಂಡಿಲ್ಲ. ಆದರೂ ಬಿಡಲಿಲ್ಲ. ಮದ್ದಿನ ಚೀಲವನ್ನೆಲ್ಲಾ ಕೆರೆದು, ಇದ್ದಷ್ಟು ಪುಡಿಯನ್ನು ಬಂದೂಕಿಗೆ ತುಂಬಿದೆ. ಗುಂಡು ಇರದಿದ್ದರೂ ನನ್ನ ಜೇಬಿನಲ್ಲಿ ಚೆರಿಹಣ್ಣುಗಳು ತುಂಬಿದ್ದುವು. ನೀವು ನೇರಿಳೆಹಣ್ಣು

ತಿನ್ನುವ ಹಾಗೆ ನಾವು ಈ ' ಚೆರಿ ' ಎಂಬ ಹಣ್ಣನ್ನು ತಿನ್ನುತ್ತೇವೆ. ಇದರ ಒಳಗೆ ನಿಮ್ಮ ನೆಲ್ಲಿಯಬೀಜದ ಹಾಗೆ ಗಟ್ಟಿಯಾದ ಬೀಜ ಇದೆ. ಇಂಥ ಚೆರಿಹಣ್ಣೊಂದನ್ನು ಬೇಗ ಬಾಯಿಗೆ ಹಾಕಿಕೊಂಡು, ಗಬಗಬನೆ ಅದರ ತಿರುಳನ್ನು ತಿಂದು, ಅದರ ಬೀಜವನ್ನು ಗುಂಡಿಗೆ



ಚೆರಿಗಿಡದ ಜಿಂಕೆ

ಬದಲಾಗಿ ಬಂದೂಕಕ್ಕೆ ಹಾಕಿದೆ. ಸರಿಯಾಗಿ ಗುರಿಯಿಟ್ಟು, ಜಿಂಕೆಯ ಎರಡು ಕೊಂಬುಗಳ ನಡುವೆ, ನಡುನೆತ್ತಿಗೆ ತಾಕುವಂತೆ ಹೊಡೆದೆ. ಏಟೇನೋ ತಗುಲಿತು; ಆದರೆ ಜಿಂಕೆ ಮಾತ್ರ ನಿಲ್ಲದೆ ಓಡಿಹೋಯಿತು. ಜಿಂಕೆ ಸತ್ತು ಬೀಳುವುದೆಂದು ನಾನೂ ನಿರೀಕ್ಷಿಸಿರಲಿಲ್ಲವಾದ ಕಾರಣ ಅದನ್ನೇನೂ ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ.

ಒಂದೆರಡು ವರ್ಷ ಕಳೆದ ಮೇಲೆ ನಾನು ಪುನಃ ಅದೇ ಕಾಡಿಗೆ ಹೋಗಬೇಕಾಗಿ ಬಂತು. ಆಗ ನನ್ನ ಜೊತೆಯಲ್ಲಿದ್ದವರು ನನಗೆ ಒಂದು ವಿಚಿತ್ರವಾದ ಜಿಂಕೆಯನ್ನು ತೋರಿಸಿದರು. ಅದು ಉಳಿದ ಜಿಂಕೆಗಳ ಹಾಗೆಯೇ ಇದ್ದರೂ ಅದರ ಎರಡು ಕೊಂಬುಗಳ ನಡುವೆ, ನಡುನೆತ್ತಿಯಲ್ಲಿ, ಒಂದು ಚೆರಿವೃಕ್ಷ ಬೆಳೆದಿತ್ತು; ಅದರ ತುಂಬ ಚೆರಿಹಣ್ಣುಗಳು ಗೊಂಚಲುಗೊಂಚಲಾಗಿದ್ದುವು. ಆಗ, ಎರಡು ವರ್ಷದ ಕೆಳಗೆ ನಾನು ಚೆರಿಬೀಜದಿಂದ ಒಂದು ಜಿಂಕೆಯ ನೆತ್ತಿಗೆ ಹೊಡೆದುದು ನೆನಪಾಯಿತು. ಅದೇ ಜಿಂಕೆಯೇ ಇದು ಎಂದು ದೃಢವಾಯಿತು. 'ಅದೃಷ್ಟವೆಂದರೆ ಹೀಗಿರಬೇಕು!' ಎಂದುಕೊಂಡು, ಈ ಸಲ ಮದ್ದು ಗುಂಡು ತುಂಬಿ ಸಿದ್ಧವಾಗಿದ್ದ ಬಂದೂಕವನ್ನು ಗುರಿಹಿಡಿದು ಹೊಡೆದೆ. ಈ ಸಲ ಜಿಂಕೆ ತಪ್ಪಿಸಿಕೊಳ್ಳಲಿಲ್ಲ. ಆ ದಿನ ರಾತ್ರಿ ಜಿಂಕೆಯ ಮಾಂಸವನ್ನೂ ಚೆರಿಹಣ್ಣುಗಳನ್ನೂ ಯಥೇಚ್ಛವಾಗಿ ತಿಂದೆವು.

ಅದೇಕೋ ಕಾಣೆ, ನನ್ನ ಹತ್ತಿರ ಮದ್ದು ಗುಂಡು ಮುಗಿದು ಹೋಗಿರುವಾಗಲೇ ಕಾಡುಮೃಗಗಳು ನನಗೆ ಎದುರಾಗುತ್ತವೆ. ಒಂದುಸಲ ಹೀಗೇ ಒಂದು ಕಾಡುಕರಡಿಯ ಕೈಗೆ ಸಿಕ್ಕಿಕೊಂಡಿದ್ದೆ. ಜೇಬಿನಲ್ಲಿದ್ದ ಎರಡು ಚಕಮುಕಿ ಕಲ್ಲಿನ ಚೂರು ಹೊರತು ನನ್ನ ಹತ್ತಿರ ಯಾವ ಆಯುಧವೂ ಇರಲಿಲ್ಲ. ಕರಡಿಯೋ, ಗುಹೆಯ

ಹಾಗೆ ಬಾಯಿ ತೆರೆದುಕೊಂಡು ನನ್ನನ್ನು ಒಂದೇ ಬಾರಿಗೆ ನುಂಗಿ ಬಿಡುವಂತೆ ಬರುತ್ತಿತ್ತು. ಏನು ಮಾಡಲಿ? 'ದೇವರೇ ಗತಿ!' ಎಂದುಕೊಂಡು ಒಂದು ಚಕಮುಕಿ ಚೂರನ್ನು ಕರಡಿಯ ಬಾಯಿಗೆ ಗುರಿಯಿಟ್ಟು ಎಸೆದೆ. ಕರಡಿ ಅದನ್ನು ಗಬಕ್ಕನೆ ನುಂಗಿ ಇನ್ನೂ ಹತ್ತಿರ ಬಂತು. ಇನ್ನೊಂದು ಚಕಮುಕಿ ಚೂರನ್ನೂ ಎಸೆದೆ. ಕರಡಿ ಅದನ್ನೂ ಗಬಕ್ಕನೆ ನುಂಗಿತು. ಈ ಎರಡನೆಯ ಚಕಮುಕಿ ಚೂರು ಕರಡಿಯ ಹೊಟ್ಟೆಯಲ್ಲಿದ್ದ ಮೊದಲನೆಯ ಚೂರಿಗೆ ತಾಗಿ ದೊಡನೆಯೇ ದೊಡ್ಡದಾಗಿ ಬೆಂಕಿ ಹತ್ತಿಕೊಂಡಿತು. ಕರಡಿ ತನ್ನ ಹೊಟ್ಟೆಯುರಿಯಿಂದ ತಾನೇ ಸುಟ್ಟು ಬೂದಿಯಾಗಿಹೋಯಿತು.

ಇನ್ನೊಂದು ಸಲ ಹೀಗೇ ನಾನು ಬರಿಗೈಯಲ್ಲಿ ಹೋಗುತ್ತಿರುವಾಗ ಒಂದು ತೋಳ ಇದಕ್ಕಿದ್ದ ಹಾಗೆ ಮೇಲೆ ಎಗರಿತು. ನಾನೂ ಏನೂ ಯೋಚಿಸದೆ, ನನ್ನ ಪ್ರಾಣರಕ್ಷಣೆ ಮಾಡಿಕೊಳ್ಳ ಬೇಕೆಂದು ಬಲದೋಳನ್ನು ಮುಂದೆ ಚಾಚಿದಾಗ ತೋಳ ನನ್ನ ಇಡಿಯ ತೋಳನ್ನೇ ನುಂಗಿಬಿಟ್ಟಿತು. ಆದರ ಬಾಯಿ ನನ್ನ ಭುಜದ ಹತ್ತಿರ ಬಂದಿತ್ತು, ನನ್ನ ಕೈ ಅದರ ಬಾಲದ ಹತ್ತಿರಕ್ಕೆ ತಾಕಿತ್ತು. ತೋಳನ ಬಾಯಿಂದ ನನ್ನ ತೋಳನ್ನು ನಾನು ತೆಗೆಯುವಂತಿರಲಿಲ್ಲ. ತೆಗೆದರೆ, ತೋಳ ನನ್ನನ್ನು ಸೀಳಿಬಿಡುವುದು ಖಂಡಿತ. ಆದ್ದರಿಂದ, ಒಂದು ಉಪಾಯಮಾಡಿದೆ. ನಾವು ಅಂಗಿಯ ತೋಳುಗಳನ್ನು ಒದರಬೇಕಾದರೆ ಒಳಗೆ ಕೈಹಾಕಿ, ಒಳಭಾಗವನ್ನು ಹೊರಗಡೆಗೆ ಎಳೆಯುವ ಹಾಗೆ ತೋಳದ ಬಾಲವನ್ನು ಒಳಗಿನಿಂದಲೇ ಬಿಗಿಯಾಗಿ ಹಿಡಿದು ಅದರ ಬಾಯ ಮೂಲಕವಾಗಿ ಎಳೆದುಬಿಟ್ಟೆ. ತೋಳದ ಒಳಭಾಗವೆಲ್ಲಾ ಹೊರಗೆ ಬಂದುಬಿಟ್ಟಿತು. ಹೀಗೆ ತೋಳ ಸತ್ತಿತು, ನಾನು ಬದುಕಿಕೊಂಡೆ.

ಇನ್ನೊಂದು ಸಲ ಹೀಗೇ ಒಂದು ಹುಚ್ಚುನಾಯಿ ಊರ ಬೀದಿಯಲ್ಲಿ ಅಟ್ಟಿಸಿಕೊಂಡು ಬಂತು. ಎಲ್ಲರೂ ಓಡಿಹೋದರೂ ನಾನು ಮಾತ್ರ ಓಡಲಿಲ್ಲ. ಧೈರ್ಯವಾಗಿ ನಿಂತು, ಹುಚ್ಚುನಾಯಿ ಹತ್ತಿರ ಬಂದಾಗ, ನನ್ನ ಅಂಗಿಯನ್ನು ಅದರ ಮೇಲೆ ಎಸೆದು, ನಾನು ಮನೆಯ ಒಳಕ್ಕೆ ಹೋಗಿ, ಬಾಗಿಲು ಹಾಕಿಕೊಂಡೆ. ನಾಯಿ ನನ್ನ ಅಂಗಿಯನ್ನು ಚೆನ್ನಾಗಿ ಕಚ್ಚಿ, ಹೊರಟುಹೋಯಿತು. ಸೇವಕನನ್ನು ಕಳುಹಿಸಿ, ಆ ಅಂಗಿಯನ್ನು ತರಿಸಿಕೊಂಡು, ಇತರ ಅಂಗಿಗಳ ಜೊತೆಯಲ್ಲಿ ತೂಗುಹಾಕಿದೆ. ಇದ್ದಕ್ಕಿದ್ದ ಹಾಗೆ ಅರ್ಧ ರಾತ್ರಿಯಲ್ಲಿ ನನ್ನ ಸೇವಕ ಬಂದು, "ಸ್ವಾಮಿ! ನಿಮ್ಮ ಅಂಗಿಗೆ ಹುಚ್ಚು ಹಿಡಿದಿದೆ!" ಎಂದು ಕೂಗಿಕೊಂಡ. ಹೋಗಿ ನೋಡಿದರೆ, ಹುಚ್ಚುನಾಯಿ ಕಡಿದ ಆ ಅಂಗಿಗೆ ನಿಜವಾಗಿಯೂ ಹುಚ್ಚೇ ಹಿಡಿದುಬಿಟ್ಟಿತ್ತು. ಅದು ಇತರ ಅಂಗಿಗಳನ್ನೆಲ್ಲಾ ಕಚ್ಚಿ ಕಚ್ಚಿ ಹರಿದುಹಾಕುತ್ತಿತ್ತು! ಏನು ಮಾಡಲಿ? 'ಹುಚ್ಚರ ಸಹವಾಸ!' ಎಂದು ಸುಮ್ಮನೆ ಇದ್ದುಬಿಟ್ಟೆ.

## ನನ್ನ ಬಳ್ಳಿಮನೆಯ ಕುದುರೆ

ಒಂದು ಸಲ ಲಿಥ್ವೇನಿಯಾ ದೇಶದಲ್ಲಿ ನಮ್ಮ ಸ್ನೇಹಿತರ ಮನೆಗೆ ಹೋಗಿದ್ದೆ. ಒಳಗೆ ಹೆಂಗಸರೊಡನೆ ಮೇಜಿನ ಸುತ್ತಲೂ ಟೀ ಕುಡಿಯುತ್ತ ಕುಳಿತುಕೊಂಡಿದ್ದೆವು. ಹೊರಗಡೆ ಅಂಗಳದಲ್ಲಿ ಗಂಡಸರು ಕೆಲವರು ಹೊಸದಾಗಿ ಬಂದಿದ್ದ ಒಂದು ಕುದುರೆಯನ್ನು ಪರಿಶೀಲಿಸುತ್ತಿದ್ದರು. ಇದ್ದಕ್ಕಿದ್ದ ಹಾಗೆಯೇ ಹೊರಗಡೆ "ಅಯ್ಯೋ! ಅಮ್ಮಾ!" ಎಂಬ ಕೂಗು ಕೇಳಿ ಬಂತು. 'ಏನಾಯಿತೋ ಏನೋ' ಎಂದು ನಾನು ಎದ್ದು ಹೊರಗೆ ಹೋದೆ. ಕುದುರೆ ಯಾರ ಕೈಗೂ ಸಿಕ್ಕದೆ ತುಂಬ ತಂಟೆಮಾಡುತ್ತಿತ್ತು.

ಮಹಾ ಮಹಾ ಸವಾರರೆಲ್ಲರೂ ಅದರ ಹತ್ತಿರ ಹೋಗಲು ಹೆದರಿ ಹಿಂಜರಿಯುತ್ತಿದ್ದರು. ನಾನೂ ಹತ್ತಿರ ಹೋಗಲೇ ಇಲ್ಲ. ದೂರ ದಿಂದಲೇ ನೆಗೆದು, ಹಾರಿ, ಕುದುರೆಯ ಬೆನ್ನಮೇಲೆ ಕುಳಿತು ಕೊಂಡೆ. ಕುದುರೆ ಕುರಿಮರಿಯ ಹಾಗೆ ಸಾಧುವಾಯಿತು. ಒಂದು ಸುತ್ತು ಅಂಗಳದ ಸುತ್ತ ತಿರುಗಿಸಿದೆ. ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಂಡು ಆಶ್ಚರ್ಯಪಟ್ಟರು. ಇನ್ನೂ ಕೆಲವು ಚಮತ್ಕಾರ ಗಳನ್ನು ತೋರಿಸಬೇಕೆಂದು ಕುದುರೆಯನ್ನು ಓಡಿಸಿ, ಹಜಾರದ ಕಿಟಕಿಯನ್ನು ದಾಟಿಸಿ, ಹೆಂಗಸರು ಟೀ ಕುಡಿಯುತ್ತಿದ್ದ ಅಂಗಳಕ್ಕೆ ಬಂದು, ಕುದುರೆಯನ್ನು ಮೇಜಿನಮೇಲೆ ನಡೆದಾಡಿಸಿದೆ. ಕುದುರೆ ಬಹಳ ಎಚ್ಚರಿಕೆಯಿಂದ ಹೆಜ್ಜೆ ಎತ್ತಿ ಇಡುತ್ತಾ, ಒಂದು ಚೂರು ಪಾತ್ರೆಯನ್ನೂ ಒಡೆಯದ ಹಾಗೆ, ಮೇಜಿನ ಆ ಕಡೆಯಿಂದ ಈ ಕಡೆಗೂ ಈ ಕಡೆಯಿಂದ ಆ ಕಡೆಗೂ ಹತ್ತು ಸಲ ಓಡಿಯಾಡಿತು. ಮೊದಲ ಸಲ ಕುದುರೆಯನ್ನು ಕಂಡಾಗ ಹೆದರಿಕೆಯಿಂದ ಚೀರಿದ ಹೆಂಗಸರು ಕೂಡ ಅದರ ಮೈಯನ್ನು ಸವರಿ, 'ಭಲೆ! ಭೇಷ್!' ಎಂದರು. ಅನಂತರ, ಅಂತಹ ಕುದುರೆಯನ್ನು ಪಡೆಯುವುದಕ್ಕೆ ನಾನೇ ಪರಮ ಯೋಗ್ಯನೆಂದು ಅವರು ಅಭಿಪ್ರಾಯಪಟ್ಟು ಅದನ್ನು ನನಗೇ ಕೊಟ್ಟರು.

ನಾನು ಟರ್ಕಿ ದೇಶದವರ ಮೇಲೆ ಯುದ್ಧಕ್ಕೆ ಹೋದಾಗ ಈ ಕುದುರೆಯನ್ನು ಏರಿಕೊಂಡೇ ಹೋದದ್ದು. ಈ ಕುದುರೆ ಯಿಂದಲೇ ಹೋದ ಹೋದ ಕಡೆಯಲ್ಲೆಲ್ಲ ನನಗೆ ಜಯ ಲಭಿಸಿದ್ದು. ಒಂದು ಸಲ ಈ ಕುದುರೆಯನ್ನು ಏರಿಕೊಂಡು ನಾನು ಶತ್ರುಗಳನ್ನು ಬೆನ್ನಟ್ಟಿದೆ. ಬಹುಬೇಗ ನನ್ನ ಜೊತೆಯವರೆಲ್ಲ ಹಿಂದೆ ಉಳಿದು ಹೋದರು. ನಾನೂ ಶತ್ರುಗಳನ್ನು ಅಟ್ಟಿ ಬರುವ ಭರದಲ್ಲಿ ಅವರ ಊರಿನವರೆಗೂ ಬಂದುಬಿಟ್ಟಿದ್ದೆ. ನಾನು ಕೋಟೆಯ ಮಹಾ

ದ್ವಾರವನ್ನು ದಾಟುವ ವೇಳೆಗೆ ಅವರು ದಿಡ್ಡಿಯ ಬಾಗಿಲನ್ನು ಮೇಲಿನಿಂದ ಇಳಿಬಿಡುತ್ತಿದ್ದರೂ ನಾನು ವೇಗದಿಂದ ಊರೊಳಕ್ಕೇ ನುಗ್ಗಿದೆ. ಊರಿನ ಮಧ್ಯಕ್ಕೆ ಬಂದು ಸುತ್ತಲೂ ನೋಡಿದರೆ,



ಕುದುರೆ ನೀರು ಕುಡಿಯಿತು.

ಶತ್ರುಗಳೂ ಯಾರೂ ಕಾಣಲಿಲ್ಲ, ಮಿತ್ರರೂ ಯಾರೂ ಕಾಣಲಿಲ್ಲ. ಅಷ್ಟು ದೂರದಿಂದ ಓಡಿಬಂದು ಆಯಾಸಗೊಂಡಿರುವ ಕುದುರೆಗೆ ಇಷ್ಟು ನೀರಾದರೂ ಕುಡಿಸೋಣವೆಂದು ಪಕ್ಕದಲ್ಲಿಯೇ ಇದ್ದ ನೀರಿನ ತೊಟ್ಟಿಯ ಹತ್ತಿರಕ್ಕೆ ನಿದಾನವಾಗಿ ಕರೆದುಕೊಂಡು ಹೋದೆ. ಕುದುರೆ ನೀರು ಕುಡಿಯಿತು, ಕುಡಿಯಿತು, ಕುಡಿಯಿತು. ಅದು ಅಷ್ಟು ನೀರು ಕುಡಿದುದನ್ನು ನಾನು ಅದುವರೆಗೆ ಕಂಡಿರ ಲಿಲ್ಲ. ಅಷ್ಟರಲ್ಲಿ 'ಯಾರಾದರೂ ಬಂದರೋ ಏನೋ' ಎಂದು ಹಿಂದಿರುಗಿ ನೋಡಿದೆ. ನೋಡಿದರೆ, ಇದೇನು ಆಶ್ಚರ್ಯ! ನನ್ನ ಕುದುರೆಗೆ ಎರಡು ಹಿಂಗಾಲುಗಳೂ ಇಲ್ಲವೇ ಇಲ್ಲ! ಅಷ್ಟೇ ಅಲ್ಲ, ಕುದುರೆಯ ಹಿಂಭಾಗದ ಅರ್ಧ ಮೈಯೇ ಇಲ್ಲ! ಆದ್ದರಿಂದಲೇ ಕುದುರೆ ಬಾಯಿಂದ ಕುಡಿದ ನೀರೆಲ್ಲಾ ಹೊಟ್ಟೆಯಿಂದ ಹಾಗೇ ಸುರಿದು ಹೋಗುತ್ತಿದೆ!

ಆಗ, 'ಕುದುರೆಯ ಇನ್ನರ್ಧ ಮೈ ಏನಾಗಿರಬಹುದು?' ಎಂದುಕೊಂಡು, ಅದನ್ನು ಹುಡುಕುತ್ತ ಬಂದ ದಾರಿಯಲ್ಲೇ ಹಿಂದಿರುಗಿ, ಕೋಟೆಯ ದಿಡ್ಡೀಬಾಗಿಲಿನವರೆಗೂ ಬಂದೆ. ಕೆಳಗೆ ಬಿದ್ದ ದಿಡ್ಡೀಬಾಗಿಲನ್ನು ಮೇಲಕ್ಕೆತ್ತಿ ನೋಡಿದೆ. ಕುದುರೆಯ ಹಿಂಭಾಗದ ಅರ್ಧಮೈ ಅಲ್ಲಿ ಆ ಬಾಗಿಲಿನ ಆಚೆ ಇನ್ನೂ ವಿಲ ವಿಲನೆ ಒದ್ದಾಡುತ್ತ ಬಿದ್ದಿತ್ತು. 'ಓಹೋ! ನಾನು ಬರುವ ವೇಳೆಗೆ ಬಾಗಿಲು ಇಳಿಯಬಿಡುತ್ತಿದ್ದರೂ ನಾನು ಅವಸರದಲ್ಲಿ ಮುಂದೆ ಹೋದೆ. ಬಾಗಿಲು ಕುದುರೆಯ ಬೆನ್ನಮೇಲೆ ಬಿತ್ತು. ಆದ್ದರಿಂದ ಕತ್ತರಿಸಿದ ಹಿಂಭಾಗ ಅಲ್ಲಿಯೇ ಹೊರಗೆ ಬಿತ್ತು. ಕುದುರೆಯ ಉಳಿದರ್ಧ ಊರೊಳಕ್ಕೆ ಹೋಯಿತು' ಎಂದು ಆಗ ನನಗೆ ತಿಳಿಯಿತು. ಒಡನೆಯೆ ಆ ಒದ್ದಾಡುತ್ತಿದ್ದ ಅರ್ಧವನ್ನು ಎತ್ತಿ, ನಿಂತಿದ್ದ ಅರ್ಧಕ್ಕೆ ಜೋಡಿಸಿ, ಅಲ್ಲಿಯೇ ಕಂದಕದ ಪಕ್ಕದಲ್ಲಿದ್ದ

ಕೆಲವು ಮೂಲಿಕೆಗಳನ್ನು ಇಟ್ಟು ಬಲವಾಗಿ ಕಟ್ಟಿದೆ. ಒಂದೆರಡು ವಾರಗಳಲ್ಲಿ ಎರಡು ಅರ್ಧಗಳೂ ಕೂಡಿಕೊಂಡವು. ಗಾಯ ವಾಸಿ ಯಾಯಿತು. ಅಷ್ಟೇ ಅಲ್ಲ. ಸಂಧಿಸಿದ ಕಡೆಯಲ್ಲಿ ಕಟ್ಟಿದ್ದ ಮೂಲಿಕೆ



ಕುದುರೆಯ ಬೆನ್ನಿನ ಮೇಲೆ ಬಳ್ಳಿಯ ಮನೆ

ಗಳು ಅಲ್ಲೇ ಬೇರುಬಿಟ್ಟು ಬೆಳೆದು, ಕುದುರೆಯ ಬೆನ್ನ ಮೇಲೆಯೇ ಒಂದು ಬಳ್ಳಿಯ ಮನೆ ನಿರ್ಮಾಣವಾಗಿತ್ತು. ಆ ಕಾಲದಿಂದ ನಾನು ಕುದುರೆಯ ಮೇಲೆ ಹೋಗುವಾಗ ಬಿಸಿಲಿದ್ದರೆ, ಈ ಬಳ್ಳಿಯ ಮನೆ ನನಗೆ ತಂಪಾದ ನೆರಳು ಕೊಡುತ್ತದೆ.

## ನಾನು ಚಂದ್ರಲೋಕಕ್ಕೆ ಹೋಗಿದ್ದೆ

ಟರ್ಕಿ ದೇಶದೊಡನೆ ನಮಗೆ ಯುದ್ಧ ನಡೆದಾಗ ನಾನು ಶತ್ರುಗಳನ್ನು ಅವರ ಪಟ್ಟಣದೊಳಕ್ಕೆ ಅಟ್ಟಿಸಿಕೊಂಡು ಹೋದುದೂ ಅಲ್ಲಿ ಕತ್ತರಿಸಿಹೋದ ನನ್ನ ಕುದುರೆಯನ್ನು ನಾನು ಪುನಃ ಪಡೆದು ಕೊಂಡದ್ದೂ ನಿಮಗೆ ತಿಳಿದೇ ಇದೆ. ಆದರೆ ಅಲ್ಲಿಯೇ ನಾನು ಟರ್ಕಿಜನರ ಕೈಗೆ ಸೆರೆಸಿಕ್ಕಿದೆನೆಂಬುದು ಬಹುಶಃ ನಿಮಗೆ ತಿಳಿದಿರ ಲಾರದು.

ನಿಜ, ನಾನು ಸೆರೆ ಸಿಕ್ಕಿದೆ. ಟರ್ಕಿಯ ಸುಲ್ತಾನನ ಅರಮನೆ ಯಲ್ಲಿ ನನ್ನನ್ನು ಗುಲಾಮನನ್ನಾಗಿ ನೇಮಿಸಿಕೊಂಡರು. ನನಗೆ ಅವರು ನೇಮಿಸಿದ ಕೆಲಸವಾದರೂ ವಿಚಿತ್ರವಾಗಿತ್ತು. ಅರಮನೆಯ ಖಾಸಾ ಜೇನುನೊಣಗಳ ಹಿಂಡನ್ನು ನಾನು ಪ್ರತಿದಿವಸವೂ ಅಟ್ಟಿ ಕೊಂಡು ಹೋಗಿ, ಅರಮನೆಯ ತೋಟಗಳಲ್ಲಿ ಅವುಗಳಿಗೆ ಹೂವು ಮೇಯಿಸಿಕೊಂಡು, ರಾತ್ರಿಯಾಗುವುದರೊಳಗಾಗಿ ಅವುಗಳನ್ನು ಅರಮನೆಗೆ ಕರೆದು ತರಬೇಕಾಗಿತ್ತು. ಹಿಂಡಿನಲ್ಲಿ ಒಂದು ಜೇನು ಹುಳು ಕಳೆದುಹೋಗಿದ್ದರೂ ನನ್ನ ತಲೆ ಹೋಗುತ್ತಿತ್ತು. ನಾನು ಇಂತಹ ಕಷ್ಟತರವಾದ ಕಾರ್ಯವನ್ನು ದಿನವೂ ಮಾಡಬೇಕಾಗಿತ್ತು.

ಹೀಗೆಯೇ ನಡೆಯುತ್ತಿರುವಾಗ, ಒಂದು ಸಂಜೆ ಹಿಂಡನ್ನು ಮನೆಗೆ ಕರೆದುಕೊಂಡು ಹೋಗುವ ಮೊದಲು ಎಣಿಸಿ ನೋಡಿದರೆ, ಒಂದು ಜೇನುಹುಳು ಕಡಿಮೆಯಿತ್ತು. ಎಲ್ಲಿ ಹೋಯಿತೋ ಎಂದು

ಸುತ್ತಲೂ ನೋಡಿದರೆ, ಎರಡು ಭಾರಿ ಕರಡಿಗಳು ಅದನ್ನು ಅಟ್ಟಿಸಿ ಕೊಂಡು ಕಾಡುತ್ತಿದ್ದುವು. ಆ ಸಣ್ಣ ಜೇನುಹುಳು ಹೊತ್ತುಕೊಂಡು ಹಿಂದಿರುಗುತ್ತಿದ್ದ ಮಕರಂದವನ್ನು ಕದ್ದು ತಿಂದುಬಿಡಬೇಕೆಂದು ಆ ಕರಡಿಗಳು ತಂತ್ರಮಾಡಿಕೊಂಡಿದ್ದುವು. ಕರಡಿಗಳನ್ನು ಓಡಿ ಸೋಣವೆಂದರೆ ಕೈಯಲ್ಲಿ ಯಾವ ಆಯುಧವೂ ಇರಲಿಲ್ಲ. ಟರ್ಕಿ ದೇಶದ ರಾಜಗುಲಾಮರಿಗೆ ಚಿಹ್ನೆಯಾದ ಒಂದು ಬೆಳ್ಳಿಯ ಕೊಡಲಿ ಮಾತ್ರ ಕೈಯಲ್ಲಿತ್ತು. ಅದರಿಂದ ಏನೂ ಅಂಥ ಗಾಯವಾಗುವ ಹಾಗಿರಲಿಲ್ಲವಾದರೂ ಕರಡಿಗಳಿಗೆ ಹೆದರಿಕೆಯಾದರೂ ಆಗಿ ಜೇನು ಹುಳು ಬದುಕಿಕೊಳ್ಳಬಹುದೆಂಬ ಆಸೆಯಿಂದ ಆ ಕೊಡಲಿಯನ್ನೇ ಕರಡಿಗಳ ಕಡೆಗೆ ಎಸೆದೆ. ಎಸೆದಾಗ ಕೈ ಅದು ಹೇಗೋ ಸ್ವಲ್ಪ ತಿರುಗಿ, ಕೊಡಲಿ ಕರಡಿಗಳಿಗೆ ತಗಲುವ ಬದಲು ಮೇಲುಗಡೆಗೆ ಹಾರಿ, ಬೆಳ್ಳಗೆ ಬೆಳಗುತ್ತಿದ್ದ ಚಂದ್ರನಲ್ಲಿ ಹೋಗಿ ಸಿಕ್ಕಿಕೊಂಡಿತು. ನನ್ನ ಗುಲಾಮಚಿಹ್ನೆಯಾದ ಬೆಳ್ಳಿಯ ಕೊಡಲಿಯಿಲ್ಲದೆ ನಾನು ಅರಮನೆಗೆ ಹಿಂದಿರುಗುವಂತಿಲ್ಲ. ಏನು ಮಾಡಲಿ? ಆಗ ಥಟಕ್ಕನೆ ಜ್ಞಾಪಕ ಬಂತು. ಟರ್ಕಿದೇಶದ ಒಂದು ಜಾತಿಯ ಅವರೆ ನೆಲದಲ್ಲಿ ನೆಟ್ಟ ಗಳಿಗೆಯೆ ಬುಳುಬುಳನೆ ಬೆಳೆದು ಅಸಾಧ್ಯವಾದ ಎತ್ತರಕ್ಕೆ ಏರುತ್ತಿತ್ತು. ಅಂಥ ಅವರೆ ನನ್ನ ಜೇಬಿನಲ್ಲೂ ಎರಡು ಕಾಳಿತ್ತು. ನಾನು ಅದನ್ನು ಆಗಲೇ ನೆಟ್ಟು, ನೀರು ಬಿಟ್ಟೆ. ಅದು ಒಡನೆಯೇ ಮೊಳೆತು, ಚಿಗುರಿ, ಬಳ್ಳಿ ಬೆಳೆಯತೊಡಗಿ, ಮೇಲೆ ಮೇಲೆ ಇನ್ನೂ ಮೇಲೆ ಚಂದ್ರನವರೆಗೂ ಬೆಳೆದು, ಚಂದ್ರನ ಒಂದು ಕೊಂಬಿಗೆ ಸಿಕ್ಕಿಕೊಂಡಿತು. ನಾನೂ ತಡಮಾಡದೆ ಆ ಬಳ್ಳಿಯನ್ನು ಹತ್ತಿಕೊಂಡು ಹೋಗಿ, ಚಂದ್ರಲೋಕವನ್ನು ಸೇರಿ, ನನ್ನ ಕೊಡಲಿ ಯನ್ನು ಹುಡುಕಿದೆ.

ಆದರೆ ಸುತ್ತಲೂ ಸರ್ವವೂ ಬೆಳ್ಳಿಯ ಹಾಗೆ ಬೆಳಗು ತ್ತಿದ್ದ ಆ ಚಂದ್ರಲೋಕದಲ್ಲಿ ಬೆಳ್ಳಿಯ ಕೊಡಲಿ ಬೇಗ ಕಣ್ಣಿಗೆ ಕಾಣಿಸೀತೆ? ಬಹಳ ಶ್ರಮಪಟ್ಟು ಹುಡುಕಿದ ಮೇಲೆ, ಎಲ್ಲೋ ಒಂದು ಕಡೆ, ಒಂದು ಹುಲ್ಲಿನ ಮೆದೆಯ ಮಧ್ಯೆ ಸಿಕ್ಕಿತು. ಸರಿ, ಅದನ್ನು ತೆಗೆದುಕೊಂಡು ಕೆಳಗಿಳಿದು ಬರೋಣವೆಂದು ಬಳ್ಳಿಯನ್ನು



ಚಂದ್ರಲೋಕದಿಂದ ಇಳಿದೆ

ಹುಡುಕಿದರೆ, ಬಳ್ಳಿಯೇ ಇಲ್ಲ! ನಾನು ಕೊಡಲಿಯನ್ನು ಹುಡುಕು ತ್ತಿದ್ದಾಗ ಸೂರ್ಯ ಮೇಲೇರಿ ಬಂದು, ಅವನ ಬಿಸಿಲಿನ ಶಾಖವನ್ನು ತಡೆಯಲಾರದೆ ಆ ಬಳ್ಳಿ ಒಣಗಿ ಸೀದುಹೋಗಿತ್ತು. ಆದರೂ ನಾನೇನೂ ಧೈರ್ಯಗೆಡಲಿಲ್ಲ. ಪಕ್ಕದಲ್ಲಿಯೇ ಇದ್ದ ಮೆದೆಯಿಂದ ಒಂದಿಷ್ಟು ಹುಲ್ಲು ಕಿತ್ತುಕೊಂಡು, ಹೊಸೆದು, ಒಂದು ಮಾರುದ್ದ ಹಗ್ಗ ಮಾಡಿಕೊಂಡೆ. ಅದರ ಒಂದು ತುದಿಯನ್ನು ಚಂದ್ರನ ಕೊಂಬಿಗೆ ಕಟ್ಟಿ, ಅದರ ಮೂಲಕವಾಗಿ ಕೆಳಗಿಳಿದೆ. ಹಗ್ಗದ ಕೆಳಕೊನೆಯ ವರೆಗೂ ಬಂದಾಗ, ಚಂದ್ರನಿಗೂ ನನ್ನ ಕೈಗೂ ಮಧ್ಯೆ ವ್ಯರ್ಥವಾಗಿ ಇದ್ದ ಹಗ್ಗವನ್ನು ಕೊಡಲಿಯಿಂದ ಕತ್ತರಿಸಿ, ನನ್ನ ಕೈಲಿದ್ದ ಹಗ್ಗದ ತುಂಡಿಗೆ ಗಂಟುಹಾಕಿ, ಪುನಃ ಕೆಳಗಿಳಿದೆ. ಹೀಗೇ ಮೇಲಿನ ಹಗ್ಗವನ್ನು ಕಡಿದು, ಕೆಳಗಿನ ಚೂರಿಗೆ ಗಂಟು ಹಾಕುವ ಕೆಲಸದಿಂದ ಹಗ್ಗದ ಉದ್ದ ಬರುಬರುತ್ತ ಕಡಿಮೆ ಯಾಯಿತು. ನಾನು ಭೂಮಿಯಿಂದ ಇನ್ನೂ ನಾಲ್ಕೈದು ಮೈಲಿ ಎತ್ತರದಲ್ಲಿರುವಾಗಲೇ ಹಗ್ಗವೆಲ್ಲಾ ಮುಗಿದು ಹೋಯಿತು. ಧೊಪ್ಪನೆ ದುಮುಕಿಬಿಟ್ಟೆ. ನಾನು ಅಷ್ಟು ಎತ್ತರದಿಂದ ದುಮುಕಿ ದಾಗ, ನನ್ನ ಭಾರವನ್ನು ತಡೆಯಲಾರದೆ ಭೂಮಿ ಅರ್ಧ ಮೈಲಿ ಹಳ್ಳವಾಗಿಹೋಯಿತು. ಹಳ್ಳದಿಂದ ಮೇಲೆ ಬರುವುದಾದರೂ ಸುಲಭವಾಗಿರಲಿಲ್ಲ. ಕೈಯ ಉಗುರುಗಳಿಂದಲೇ ಹಳ್ಳದ ಗೋಡೆ ಗಳನ್ನು ಕೆತ್ತಿ ಅಗೆದು, ಅದನ್ನೇ ಮೆಟ್ಟಲು ಮಾಡಿಕೊಂಡು ಮೇಲೆ ಹತ್ತಿ ಬಂದೆ.

## ತುತ್ತೂರಿಯ ಘಟ್ಟ

ಸ್ವಲ್ಪ ಕಾಲದಲ್ಲಿಯೇ ನಮಗೂ ಟರ್ಕಿಯವರಿಗೂ ಸಂಧಿ ಯಾಯಿತು. ಆಗ ನನಗೆ ಸೆರೆಯಿಂದ ಬಿಡುಗಡೆಯಾಯಿತು.

ನನಗೆ ಟರ್ಕಿಯವರೇ ಒದಗಿಸಿದ ಜೋಡುಕುದುರೆಯ ರಥದಲ್ಲಿ ನಾನು ಸೆಯಿಂಟ್ ಪೀಟರ್ಸ್‌ಬರ್ಗಿಗೆ ಹೊರಟೆ.

ಒಂದು ಕಡೆ ದಾರಿ ಬಹಳ ಕಿರಿದಾಗಿತ್ತು. ಎದುರಿಗೆ ಬೇರೆ ಯಾವುದಾದರೂ ರಥ ಬಂದರೆ, ಮುಂದೆ ಹೋಗುವುದಕ್ಕಾಗಲಿ ಹಿಂದೆ ತಿರುಗುವುದಕ್ಕಾಗಲಿ ಸಾಧ್ಯವಾಗುವುದಿಲ್ಲವೆಂದು 'ತುತ್ತೂರಿಯನ್ನು ಆಗಾಗ್ಗೆ ಊದುತ್ತಿರು' ಎಂದು ನನ್ನ ಸಾರಥಿಗೆ ಹೇಳಿದೆ. ಅವನೂ ತನ್ನ ಶಕ್ತಿಯನ್ನೆಲ್ಲ ಬಿಟ್ಟು ಊದಿದ. ಏನೂ ಸದ್ದೇ ಆಗಲಿಲ್ಲ. ಏಕೋ ಏನೋ ಅರ್ಥವಾಗಲಿಲ್ಲ. ಹಾಗೇ ಮುಂದೆ ಹೋದೆವು.

ಸ್ವಲ್ಪ ದೂರ ಹೋಗುವುದರೊಳಗಾಗಿ ನಾನು ಹೆದರಿಕೊಂಡಿದ್ದ ಹಾಗೆಯೇ ಎದುರುಗಡೆಯಿಂದ ಒಂದು ರಥ ಬಂತು. ಎರಡು ರಥಗಳ ಕುದುರೆಗಳೂ ಮೂತಿಗೆ ಮೂತಿ ತಾಗಿಸಿ ನಿಂತುವು. ಯಾವ ರಥವೂ ಮುಂದೆ ಹೋಗುವ ಹಾಗಿರಲಿಲ್ಲ, ಯಾವುದೂ ಹಿಂದೆ ತಿರುಗುವ ಹಾಗಿರಲಿಲ್ಲ. ಆದರೆ ಎಷ್ಟು ಹೊತ್ತು ಸುಮ್ಮನೆ ಕುಳಿತಿರುವುದು? ನಾನೇ ಎದ್ದು, ನನ್ನ ರಥದ ಕುದುರೆಗಳನ್ನು ಬಿಚ್ಚಿದೆ. ಬರಿಯ ರಥವನ್ನು ಸಾರಥಿ ಸಮೇತವಾಗಿ ತಲೆಯ ಮೇಲಿಟ್ಟುಕೊಂಡು, ಒಂದೇ ಏಟಿಗೆ ಹಾರಿ, ಎದುರು ಗಾಡಿಯನ್ನು ದಾಟಿ, ಆಚೆ ಕಡೆ ರಥವನ್ನು ಕೆಳಗಿಳಿಸಿದೆ. ಪುನಃ ಇನ್ನೊಂದು ಬಾರಿ ಹಿಂದಕ್ಕೆ ಹಾರಿ, ನನ್ನ ಜೋಡುಕುದುರೆಗಳಲ್ಲಿ ಒಂದು ಕುದುರೆಯನ್ನು ಎಡಹೆಗಲ ಮೇಲೆ ಎತ್ತಿಕೊಂಡು, ಇನ್ನೊಂಥನ್ನು ಬಲಕಂಕುಳಲ್ಲಿ ಅಮುಕಿಕೊಂಡು, ಪುನಃ ಹಾರಿ ಎದುರು ಗಾಡಿಯನ್ನು ದಾಟಿದೆ. ಬಲಕಂಕುಳಲ್ಲಿದ್ದ ಕುದುರೆ ಸ್ವಲ್ಪ ಬೆಚ್ಚಿ ಕಾಲು ಝಾಡಿಸಿದುದರಿಂದ ನನ್ನ ಅಂಗಿಯ ಜೇಬು ಹರಿದುಹೋಯಿತು. ಇದು ಹೊರತು ಬೇರೆ ಯಾವ ಕಷ್ಟನಷ್ಟಗಳನ್ನೂ ಅನುಭವಿಸದೆ,

ನಾನು ಆ ಕುದುರೆಗಳನ್ನು ಪುನಃ ರಥಕ್ಕೆ ಹೂಡಿಕೊಂಡು ನಮ್ಮ ಊರಿನ ದಾರಿಯನ್ನು ಹಿಡಿದೆ.

ದಾರಿಯಲ್ಲಿ ಒಂದು ಊಟದ ಮನೆ ಸಿಕ್ಕಿತು. ಅಲ್ಲಿ ಬಿಸಿಯಾಗಿ ಕುಡಿಯುವುದಕ್ಕೂ ಏನಾದರೂ ಸಿಕ್ಕುತ್ತಿತ್ತು. ದಾರಿಯ ಉದ್ದಕ್ಕೂ ಚಳಿ ಬಹಳವಾಗಿದ್ದುದರಿಂದ ಬೆಚ್ಚಗೆ ಏನಾದರೂ ಕುಡಿಯೋಣವೆಂದು ಆ ಊಟದ ಮನೆಯ ಎದುರಿಗೆ ರಥವನ್ನು ನಿಲ್ಲಿಸಿ, ನಾವು ಒಳಗೆ ಹೋದೆವು. ಒಳಗೆ ದೊಡ್ಡದೊಂದು ಒಲೆಯಲ್ಲಿ ಬೆಂಕಿ ಉರಿಯುತ್ತಿತ್ತು. ಬೆಂಕಿಯ ಹತ್ತಿರ ಕೈ ಕಾಯಿಸಿಕೊಳ್ಳುತ್ತ ಕುಳಿತೆವು. ಸಾರಥಿ ತನ್ನ ತುತ್ತೂರಿಯನ್ನು ಒಲೆಯ ಪಕ್ಕದ ಮೊಳೆಗೆ ತೂಗಿಹಾಕಿ, ತಾನು ಬೆಂಕಿಯ ಹತ್ತಿರ ಬಂದ. ಸುಮಾರು ಐದಾರು ನಿಮಿಷ ಆಗಿರಬಹುದು. ಇದ್ದಕ್ಕಿದ್ದ ಹಾಗೆ ತುತ್ತೂರಿಯ ಶಬ್ದ ಕೇಳಿಬಂತು. ತಲೆಯೆತ್ತಿ ನೋಡಿದರೆ, ನಮ್ಮ ಸಾರಥಿಯ ತುತ್ತೂರಿಯಿಂದಲೇ ಆ ಶಬ್ದ ಹೊರಡುತ್ತಿತ್ತು. ಸಾರಥಿ ಅದನ್ನು ಮುಟ್ಟದಿದ್ದರೂ ಅದು ಮೊಳೆಯ ಮೇಲಿಂದಲೇ ಹೇಗೆ ಶಬ್ದಮಾಡುತ್ತಿತ್ತು?

ಹಾಗೇ ಕುಳಿತು ಸ್ವಲ್ಪ ಯೋಚನೆ ಮಾಡಿದ ಮೇಲೆ ತುತ್ತೂರಿಯ ಆ ವಿಚಿತ್ರವಾದ ವರ್ತನೆ ಅರ್ಥವಾಯಿತು. ಸಾರಥಿ ದಾರಿಯ ಉದ್ದಕ್ಕೂ ತುತ್ತೂರಿಯಲ್ಲಿ ಊದಿದ ರಾಗಗಳೆಲ್ಲ ಹೊರಗಿನ ಚಳಿಯಿಂದ ಘನಿಸಿ ಘಟ್ಟಿಯಾಗಿ ತುತ್ತೂರಿಯ ಒಳಗಡೆಯೆ ಸಿಕ್ಕಿಕೊಂಡಿದ್ದುವು. ಈಗ ಬೆಂಕಿಯ ಹತ್ತಿರ ಬಂದಾಗ, ಚಳಿ ಕಡಿಮೆಯಾಗಿ, ಘನಿಸಿ ಘಟ್ಟಿಯಾಗಿದ್ದ ರಾಗಗಳೆಲ್ಲ ಕರಗಿ ಸರಾಗವಾಗಿ ಹೊರಗೆ ಹರಿದು ಬರುತ್ತಿದ್ದುವು! ಆದ್ದರಿಂದಲೇ ಆ ತುತೂರಿ ಸಾರಥಿ ಹಿಂದೆ ಊದಿದ ರಾಗಗಳನ್ನೆಲ್ಲ ಈಗ ಪುನಃ ತಾನಾಗಿಯೇ ಊದುತ್ತಿತ್ತು! ಇದು ನನಗೆ ಬಹಳ ಆಶ್ಚರ್ಯವುಂಟುಮಾಡಿತು.

ನನ್ನ ಸಾರಥಿಯಂತೂ ಆಶ್ಚರ್ಯದಿಂದ ಮಾತೇ ಆಡಲಾರದೆ ಮೂಕ ನಾಗಿಹೋದ.

## ಮಹಾಮತ್ಸ್ಯದ ಹೊಟ್ಟೆಯಲ್ಲಿ

ಒಂದು ಸಲ ಮೆಡಿಟೆರೇನಿಯನ್ ಸಮುದ್ರದಲ್ಲಿ ನಾನು ಸತ್ತೇ ಹೋಗಬೇಕಾಗಿತ್ತು. ಆದರೂ ಹೇಗೆ ಬದುಕಿದೆ ಎಂಬುದು ವಿಚಿತ್ರವಾಗಿದೆ. ಹೇಳುತ್ತೇನೆ, ಕೇಳಿ.

ನಾನು ಮಾರ್ಸೆಲಿ ನಗರದ ಸಮುದ್ರತೀರದಲ್ಲಿ ಒಂದು ಸಲ ಸ್ನಾನಮಾಡುತ್ತಿದ್ದೆ. ಬಿಸಿಲಿನ ಬೇಗೆಯನ್ನು ಪರಿಹಾರಮಾಡಿ ಕೊಳ್ಳೋಣವೆಂದು ಬಟ್ಟೆಗಳನ್ನೆಲ್ಲ ಬಿಚ್ಚಿ, ದಡದಲ್ಲಿ ಮಡಿಸಿಟ್ಟು, ಸಮುದ್ರದಲ್ಲಿ ಈಜಾಡುತ್ತಿದ್ದೆ. ಆಗ ಎದುರಿಗೆ ಒಂದು ಮಹಾ ಮತ್ಸ್ಯ ದೊಡ್ಡದಾಗಿ ಬಾಯಿ ತೆರೆದುಕೊಂಡು ಅತಿವೇಗದಿಂದ ನನ್ನ ಕಡೆಗೆ ನುಗ್ಗಿ ಬರುತ್ತಿತ್ತು. ಅದಕ್ಕೆ ಸಿಕ್ಕದ ಹಾಗೆ ತಪ್ಪಿಸಿ ಕೊಂಡು ಓಡುವುದು ಸಾಧ್ಯವೇ ಇರಲಿಲ್ಲ. ' ಇರಲಿ, ದೇವರಿದ್ದಾನೆ ' ಎಂದುಕೊಂಡು, ಕೈಗಳನ್ನು ದೇಹದ ಪಕ್ಕಕ್ಕೆ ಜೋಡಿಸಿ, ಕಾಲು ಗಳನ್ನು ಉದ್ದವಾಗಿ ನೀಡಿಕೊಂಡು ಸುಮ್ಮನೆ ಮಲಗಿಬಿಟ್ಟೆ. ಆ ಮಹಾಮತ್ಸ್ಯ ಆಯೆಂದು ಬಾಯಿ ತೆರೆದುಕೊಂಡು ದಾರಿಯಲ್ಲಿ ಸಿಕ್ಕಿದ್ದನ್ನೆಲ್ಲಾ ನುಂಗುತ್ತ ಬಂದು ನನ್ನನ್ನೂ ನುಂಗಿಬಿಟ್ಟಿತು. ನಾನೂ ಅದರ ಹಲ್ಲುಗಳಿಗೆ ಸಿಕ್ಕದ ಹಾಗೆ ನುಣಿಚಿಕೊಂಡು ಅದರ ಹೊಟ್ಟೆಯೊಳಕ್ಕೆ ಹೋದೆ.

ಅಲ್ಲಿಯೋ ತುಂಬ ಕತ್ತಲೆ, ಬಹಳ ಸೆಕೆ. ನನಗೆ ಒಳಗಿರು ವುದು ಸಾಧ್ಯವಾಗಲಿಲ್ಲ. ಏನಾದರೂ ಮಾಡಿ ಆ ಗುಹೆಯಿಂದ ತಪ್ಪಿಸಿಕೊಳ್ಳಬೇಕೆಂದು ಯೋಚಿಸಿ, ಆ ಮೀನಿಗೆ ಚಿತ್ರಹಿಂಸೆಮಾಡಿ, ಅದು ನನ್ನನ್ನು ಹೊರಕ್ಕೆ ಉಗುಳುವ ಹಾಗೆ ಮಾಡಬೇಕೆಂದು

*

ನಿಶ್ಚಯಿಸಿದೆ. ಒಳಗೆ ಸ್ಥಳ ಬೇಕಾದ ಹಾಗೆ ವಿಶಾಲವಾಗಿದ್ದುದರಿಂದ ನಾನು ಅದರ ಹೊಟ್ಟೆಯ ಒಳಗೆ ತುಳಿದೆ, ಕುಣಿದೆ, ನೆಗೆದೆ, ತಪತಪ ತಪತಪ ಎಂದು ಕಾಲಿನಿಂದ ಗುದ್ದಿದೆ, ಲಾಗ ಹಾಕಿದೆ.

ನನ್ನ ಕಾಟಗಳನ್ನು ಸಹಿಸುವುದು ಮೀನಿಗೂ ಸುಲಭವಾಗಿರಲಿಲ್ಲ. ಆದರೂ ನನ್ನನ್ನು ಉಗುಳಲು ಅದಕ್ಕೆ ಮನಸ್ಸು ಬರಲಿಲ್ಲ. ನನ್ನನ್ನು ಕೆಳಗೆ ಬೀಳಿಸಬೇಕೆಂದು ಅದು ನೀರಿನಲ್ಲಿ ಮಲಗಿರುವ ಬದಲು ನೇರವಾಗಿ ಎದ್ದು ನಿಂತುಕೊಂಡಿತು. ಹಾಗೆ ನಿಂತುಕೊಂಡಾಗ ನೋವಿನಿಂದ ಅದರ ಅರ್ಧ ಮೈ ನೀರಿನ ಮೇಲೆ ಚಾಚಿಕೊಂಡಿತು. ದಾರಿಯಲ್ಲಿ ಹೋಗುತ್ತಿದ್ದ ಯಾವುದೋ ಹಡಗಿನವರು ಅದನ್ನು ಕಂಡು, ಈಟಿಯಿಂದ ಹೊಡೆದರು. ಮೀನು ಸತ್ತು ಹೋಗಿ, ನೀರಿನಲ್ಲಿ ಅಲ್ಲಾಡದೆ ಬಿದ್ದುಕೊಂಡಿತು.

'ಸತ್ತ ಮೀನಿನ ದೇಹದಿಂದ ನಾನು ಹೊರಗೆ ಬರುವುದು ಹೇಗೆ?' ಎಂದು ಯೋಚಿಸುತ್ತಿರುವಾಗಲೇ ಆ ಮೀನನ್ನು ಕೊಂದವರು ಅದನ್ನು ತಮ್ಮ ಹಡಗಿನ ಮೇಲೆ ಎಳೆದುಕೊಂಡರು. ಮೀನನ್ನು ಅವರೇ ಕತ್ತರಿಸುತ್ತಾರೆಂದು ನನಗೆ ಧೈರ್ಯವಾದರೂ ತಲೆಬಾಲಗಳ ಕಡೆ ಕತ್ತರಿಸದೆ, ಎಲ್ಲಿ ಮಧ್ಯೆ ಕತ್ತರಿಸಿ ನನಗೆ ಗಾಯ ಮಾಡುವರೋ ಎಂದು ತುಂಬ ಹೆದರಿಕೆಯಾಗಿತ್ತು. ಆದ್ದರಿಂದ ನಾನು ನನ್ನ ಮೈಯನ್ನು ಆದಷ್ಟು ಸಂಕೋಚಮಾಡಿಕೊಂಡು ಮೀನಿನ ಮೈಯಿಂದ ದೂರವಾಗಿ ಹೊಟ್ಟೆಯ ಮಧ್ಯದಲ್ಲಿ ಬಂದು ನಿಂತೆ.

ಕೊಂಚ ಹೊತ್ತಾದಮೇಲೆ ಸ್ವಲ್ಪಸ್ವಲ್ಪವಾಗಿ ಕತ್ತಲೆ ಕಡಿಮೆಯಾಗಿ ಬೆಳಕಿನ ಕಿರಣ ನುಸುಳಿ ಬಂತು. ಬರುಬರುತ್ತ ಕಂಡಿ ದೊಡ್ಡದಾದಾಗ ನಾನೂ ಬಹಳ ಎಚ್ಚರಿಕೆಯಿಂದ ಹೊರಗೆ ತಲೆ ಹಾಕಿದೆ. ಹಡಗಿನವರೆಲ್ಲ ನನ್ನನ್ನು ಭೂತವೆಂದೋ ಪಿಶಾಚಿ

ಯೆಂದೋ ಮೊದಲು ತಿಳಿದುಕೊಂಡರು. ಆಮೇಲೆ ನಾನೂ ತಮ್ಮ ಹಾಗೆಯೇ ಮಾತನಾಡುವುದನ್ನು ಕೇಳಿ, ನನ್ನನ್ನು ಹೊರಕ್ಕೆ ಕರೆದುಕೊಂಡರು. ಮೀನು ನನ್ನನ್ನು ಹೇಗೆ ನುಂಗಿತು ಎಂಬ ಕತೆಯನ್ನೆಲ್ಲಾ ನಾನು ಅವರಿಗೆ ತಿಳಿಸಿದೆ. ಅವರು ಅದನ್ನು ಕೇಳಿ ತುಂಬ ಆಶ್ಚರ್ಯಪಟ್ಟರು.

ಅಲ್ಲಿಯೇ ಹಡಗಿನಲ್ಲಿ ಅವರು ಕೊಟ್ಟ ತಿಂಡಿತೀರ್ಥಗಳನ್ನು ತೆಗೆದುಕೊಂಡು, ಅವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸಿ ನಾನು ಪುನಃ ಸಮುದ್ರಕ್ಕೆ ನೆಗೆದೆ. ಮೀನಿನ ಹೊಟ್ಟೆಯಲ್ಲಿದ್ದು ಮೈಯೆಲ್ಲ ಹೊಲಸಾಗಿತ್ತು. ಸಮುದ್ರದ ನೀರಿನಲ್ಲಿ ಮೈ ತೊಳೆದುಕೊಂಡು, ದಡದ ಕಡೆಗೆ ಈಜಿಕೊಂಡು ಹೋಗಿ, ನಾನು ಮಡಿಸಿ ಇಟ್ಟಿದ್ದ ಬಟ್ಟೆಗಳನ್ನು ಹಾಕಿಕೊಂಡೆ.

ಆ ದಿವಸದಿಂದ ಎಲ್ಲಿ ಸಮುದ್ರಸ್ನಾನಕ್ಕೆ ಹೋಗಬೇಕಾದರೂ ನನ್ನ ಕೈಯಲ್ಲಿ ಒಂದು ಚಾಕು ಇದ್ದೇ ಇರುತ್ತದೆ.

## ಸಮುದ್ರದ ಕುದುರೆ

ನನ್ನ ಹತ್ತಿರ ಕತ್ತಿ, ಚಾಕು, ಬಂದೂಕ ಮುಂತಾದ ಆಯುಧಗಳಲ್ಲದೆ ಒಂದು ಕವಣೆಯೂ ಇದೆ. ಇದು ನನ್ನ ವಶಕ್ಕೆ ಬರುವ ಮೊದಲು ನನ್ನ ತಂದೆ ಇದನ್ನು ಉಪಯೋಗಿಸುತ್ತಿದ್ದರು. ಅವರಿಗೂ ಈ ಕವಣೆಗೂ ಸಂಬಂಧಿಸಿದ ಒಂದು ಸಂಗತಿಯನ್ನು ಹೇಳುತ್ತೇನೆ, ಕೇಳಿ.

ಒಂದು ದಿನ ನಮ್ಮ ತಂದೆ ಹಾರ್ವಿಚ್ ನಗರದ ಸಮೀಪದಲ್ಲಿರುವ ಸಮುದ್ರತೀರದಲ್ಲಿ ಸಂಜೆ ತಿರುಗಾಡುತ್ತಿದ್ದರು. ಅವರು ಸುಮಾರು ಒಂದು ಮೈಲು ನಡೆದಿರಬಹುದೆಂದು ತೋರುತ್ತದೆ; ಆಗ ಒಂದು ಭಯಂಕರವಾದ ಸಮುದ್ರದ ಕುದುರೆ ನೀರಿ

ನಿಂದ ಮೇಲೆದ್ದು, ನೆಲದ ಕಡೆಗೆ ತಿರುಗಿ, ನಮ್ಮ ತಂದೆಯ ಮೇಲೆ ರೋಷದಿಂದ ನುಗ್ಗಿ ಬಂತು. ನಮ್ಮ ತಂದೆ ಒಂದು ಕ್ಷಣ ಬೆದರಿದರು. ಆದರೆ ಒಡನೆಯೇ, ಜೇಬಿನಲ್ಲಿ ಕವಣೆ ಇದ್ದುದನ್ನು ಜ್ಞಾಪಿಸಿಕೊಂಡು, ಕಾಲುಗಳ ಹತ್ತಿರ ಬಿದ್ದಿದ್ದ ಒಂದೆರಡು ಕಲ್ಲುಗಳನ್ನು ಎತ್ತಿಕೊಂಡು, ಬೇಗ ಬೇಗ ಆ ಪ್ರಾಣಿಗೆ ಬೀರಿದರು.



ಸಮುದ್ರದ ಕುದುರೆ ಸಾಧುವಾಯಿತು

ಅವರ ಗುರಿ ಯಾವಾಗಲೂ ಬಹಳ ಚೆನ್ನಾಗಿತ್ತು. ಮೊದಲ ಸಲ ಕವಣೆ ಬೀರಿದಾಗ ಒಂದು ಕಲ್ಲು ತಗುಲಿ ಆ ಸಮುದ್ರದ ಕುದುರೆಯ ಒಂದು ಕಣ್ಣು ಕುರುಡಾಯಿತು. ಎರಡನೆಯ ಸಲ ಬೀರಿದಾಗ ಇನ್ನೊಂದು ಕಲ್ಲು ತಗುಲಿ ಇನ್ನೊಂದು ಕಣ್ಣು ಕುರುಡಾಯಿತು. ಎರಡು ಕಣ್ಣುಗಳೂ ಇದ್ದಕ್ಕಿದ್ದ ಹಾಗೆ ಕುರುಡಾಗಲು, ಆ ಸಮುದ್ರದ ಕುದುರೆ ದಾರಿ ತಿಳಿಯದೆ ಒದ್ದಾಡುತ್ತಿದ್ದಾಗ ನಮ್ಮ ತಂದೆ ಥಂಗನೆ ಎಗರಿ ಅದರ ಮೇಲೆ ಹತ್ತಿಕೊಂಡು, ಕೈಲಿದ್ದ ಕವಣೆಯನ್ನೇ ಅದರ ಬಾಯಿಗೆ ಕಡಿವಾಣದ ಹಾಗೆ ಇಟ್ಟು ಅದನ್ನೇ ಸವಾರಿಮಾಡತೊಡಗಿದರು. ಅದುವರೆಗೆ ರೋಷದಿಂದ ಘುಡು ಘುಡಿಸುತ್ತಿದ್ದ ಆ ಕುದುರೆ ಒಡನೆಯೇ ಸಾಧುಪ್ರಾಣಿಯಾಯಿತು.

ನಮ್ಮ ತಂದೆ ಅದನ್ನು ಸಮುದ್ರದ ಕಡೆಗೆ ಮುಖಮಾಡಿ ತಿರುಗಿಸಿದರು. ಅದು ಒಡನೆಯೆ ಅವರು ಹೇಳಿದ ಹಾಗೆ ಕೇಳಿ ತಿರುಗಿತು. ಆದರೆ ಅದಕ್ಕೆ ಸಮುದ್ರದ ನೀರಿನಲ್ಲಿ ಬಹುಕಾಲ ಇದ್ದು ಬೇಸರವಾಗಿತ್ತು. ನೆಲದ ಮೇಲೆ, ಸಮುದ್ರತೀರದ ಮರಳಿನ ಮೇಲೆ, ಕುಣಿದಾಡಬೇಕೆಂದು ಅದಕ್ಕೆ ಇಷ್ಟ. ಆದರೆ ನಮ್ಮ ತಂದೆ ಬಿಡಬೇಕಲ್ಲ! ಸಾಧ್ಯವಾದರೆ ಆ ಕುದುರೆಯನ್ನು ಹತ್ತಿಕೊಂಡೇ ತಮ್ಮ ತವರೂರಾದ ಹಾಲೆಂಡಿಗೂ ಹೋಗೋಣವೆಂದು ಅವರಿಗೆ ಮನಸ್ಸು. ಅಲ್ಲವೆ? ಅನಾವಶ್ಯಕವಾಗಿ ಹಡಗಿನ ಪ್ರಯಾಣದ ವೆಚ್ಚ ಏಕೆ ಕೊಡಬೇಕು?

ನಮ್ಮ ತಂದೆ ಆ ಕುದುರೆಯನ್ನು ಸಮುದ್ರದೊಳಕ್ಕೆ ನಡೆಸಿಯೇ ನಡೆಸಿದರು. ಹಾಲೆಂಡಿಗೂ ಆ ಕುದುರೆಯ ಮೇಲೆಯೇ ಬಂದು ಸೇರಿದರು. ದಾರಿಯಲ್ಲಿ ಸಮುದ್ರದೊಳಗೆ ಅವರು ಕಂಡ ಅದ್ಭುತವಾದ ಆಶ್ಚರ್ಯಕರವಾದ ದೃಶ್ಯಗಳನ್ನು ಅವರೇ ವರ್ಣಿಸಬೇಕು! ನೀವು ಕೇಳಬೇಕು! ಪರ್ವತಾಕಾರದ ಹವಳದ ರಾಶಿ

ಗಳಂತೆ! ಆನೆಯ ಗಾತ್ರದ ಮುತ್ತುಗಳಂತೆ! ನಮ್ಮಲ್ಲಿ ಮಾವಿನ ಮರ, ತೆಂಗಿನ ಮರ, ದ್ರಾಕ್ಷಿಬಳ್ಳಿ ಮುಂತಾದುವು ಇರುವ ಹಾಗೆಯೇ ಅಲ್ಲಿಯೂ ಸಮುದ್ರದ ಅಡಿಯಲ್ಲಿ ಒಂದು ಮರದ ತುಂಬ ಮೀನು ಗಳು, ಇನ್ನೊಂದರ ತುಂಬ ಮತ್ಸ್ಯಗಳು, ಮತ್ತೊಂದರ ತುಂಬ ತಿಮಿಂಗಿಲಗಳು, ಬೇರೊಂದರ ತುಂಬ ಏಡಿಗಳು–ಇನ್ನೂ ಹೀಗೆಯೇ ಚಿತ್ರವಿಚಿತ್ರವಾದ ನೀರಿನ ಪ್ರಾಣಿಗಳೆಲ್ಲ ಅಲ್ಲಿ ಗಿಡಮರಗಳ ಮೇಲೆ ಹೂವುಹಣ್ಣುಗಳ ಹಾಗೆ ಗೊಂಚಲುಗೊಂಚಲಾಗಿ ಇದ್ದುವಂತೆ. ಅವುಗಳಲ್ಲಿ ಕೆಲವು ನಮ್ಮ ತಂದೆಯನ್ನೂ ಅವರ ಕುದುರೆಯನ್ನೂ ಕಂಡೊಡನೆ, ತಮ್ಮ ಮರಗಳಿಂದ ಬಿಡಿಸಿಕೊಂಡು ಬೆನ್ನಟ್ಟಿ ಬಂದು ವಂತೆ. ಕುದುರೆಗಂತೂ ಕಣ್ಣುಗಳೆರಡೂ ಕುರುಡಾಗಿದ್ದುದರಿಂದ ಏನೂ ತಿಳಿಯುತ್ತಿರಲಿಲ್ಲ. ಆದರೆ ನಮ್ಮ ತಂದೆ ಮಾತ್ರ, ನಿದಾನ ವಾದರೆ ಆ ಪ್ರಾಣಿಗಳು ತಮ್ಮನ್ನು ಕೊಂದು ತಿಂದುಬಿಡುತ್ತವೆ ಎಂದುಕೊಂಡು, ಕುದುರೆಯನ್ನು ಬೇಗ ದೌಡಾಯಿಸಿಕೊಂಡು ಓಡಿ, ಹಾಲೆಂಡಿನ ದಡವನ್ನು ಸುರಕ್ಷಿತವಾಗಿ ಸೇರಿದರಂತೆ.

ಈ ಕತೆಯನ್ನೆಲ್ಲಾ ನೀವು ನಮ್ಮ ತಂದೆಯ ಬಾಯಿಂದಲೇ ಕೇಳಬೇಕು. ಆದರೆ ಅವರು ಮರಣ ಹೊಂದಿದ್ದಾರೆ. ಏನು ಮಾಡುವುದು? ಅವರ ಹಾಗೆ ಕಥೆ ಹೇಳಿ ವರ್ಣಿಸುವ ಶಕ್ತಿ ನನಗೆ ಸ್ವಲ್ಪವೂ ಇಲ್ಲ.

ಹಾಲೆಂಡಿಗೆ ಬಂದ ಮೇಲೆ, ನಮ್ಮ ತಂದೆ ತಮ್ಮ ಕುರುಡು ಕುದುರೆಯನ್ನು ಆ ಊರಿನ ನಗರಸಭೆಗೆ ಮಾರಿಬಿಟ್ಟರು. ನಗರ ಸಭೆಯವರು ಅಂಥ ವಿಚಿತ್ರವಾದ ಕುದುರೆಯನ್ನು ಅದುವರೆಗೆ ನೋಡಿರಲಿಲ್ಲವಾದ್ದರಿಂದ ಅದನ್ನು ಏಳು ಸಾವಿರ ಚಿನ್ನದ ನಾಣ್ಯ ಗಳಿಗೆ ಕೊಂಡುಕೊಂಡರು. ನಮ್ಮ ತಂದೆ ಸಾಯುವಾಗ ಆ ಏಳು ಸಾವಿರ ನಾಣ್ಯಗಳನ್ನೂ ಕವಣೆಯನ್ನೂ ನನಗೆ ಕೊಟ್ಟು ದಿವಂಗತ

ರಾದರು. ಈಗ ನನ್ನ ಹತ್ತಿರ ಇರುವ ಕವಣೆ ಅವರು ಕೊಟ್ಟ ಅದೇ ಕವಣೆ. ಆದರೆ ಆ ಏಳು ಸಾವಿರ ನಾಣ್ಯ ಮಾತ್ರ, ಪ್ರತಿ ವರ್ಷವೂ ತಪ್ಪದೆ ಮರಿಹಾಕುತ್ತಿರುವುದರಿಂದ, ಈಗ ಎಪ್ಪತ್ತು ಸಾವಿರ ನಾಣ್ಯವಾಗಿದೆ.

## ಧ್ರುವದ ಕರಡಿಗಳ ಧ್ವಂಸ

ನಮ್ಮ ಭೂಮಿಗೆ ಉತ್ತರದಲ್ಲಿ ಒಂದು ಧ್ರುವ ಇದೆ, ದಕ್ಷಿಣ ದಲ್ಲಿ ಒಂದು ಧ್ರುವ ಇದೆ, ಎಂದು ನೀವು ಕೇಳಿದ್ದೀರಿ. ಒಂದು ಸಲ ನಾನು ಉತ್ತರ ಧ್ರುವಕ್ಕೆ ಹೋಗಿದ್ದೆ. ಅಲ್ಲಿ ನನಗೆ ಆದ ಸಂಗತಿ ಯನ್ನು ಹೇಳಿದರೆ ನೀವು ನಂಬುತ್ತಿರೋ ಇಲ್ಲವೊ ! ನಾನಂತೂ 'ನಂಬಿದರೆ ನಂಬಿ, ಬಿಟ್ಟರೆ ಬಿಡಿ' ಎಂದು ಹೇಳಿಯೇಬಿಡುತ್ತೇನೆ.

ಇಲ್ಲಿ ನಡೆದುದನ್ನು ಹೇಳುವುದಕ್ಕೆ ಮೊದಲು ನನ್ನ ಹತ್ತಿರ ಇದ್ದ 'ಟೆಲಿಸ್ಕೋಪ್' ಎಂಬ ದೂರದರ್ಶಕ ಯಂತ್ರದ ವಿಚಾರ ವನ್ನು ಸ್ವಲ್ಪ ಹೇಳಬೇಕು. ಈ ಯಂತ್ರದ ಮೂಲಕ ನೋಡಿದರೆ, ಅತಿ ದೂರದಲ್ಲಿರುವ ವಸ್ತುಗಳು ಕೂಡ ಅತಿ ಹತ್ತಿರದಲ್ಲಿ ಇದ್ದಂತೆ ದೊಡ್ಡದಾಗಿ ಕಾಣುತ್ತವೆ.

ನಾನು ಹೋದ ಕಡೆಯಲ್ಲೆಲ್ಲ ನನ್ನ ಕವಣೆಯನ್ನು ತೆಗೆದು ಕೊಂಡು ಹೋಗುವ ಹಾಗೆಯೇ ಈ ದೂರದರ್ಶಕ ಯಂತ್ರವನ್ನೂ ತೆಗೆದುಕೊಂಡು ಹೋಗುವುದು ಪದ್ಧತಿ. ಒಂದು ಸಲ ನಾನು ಜಿಬ್ರಾಲ್ಟರಿಗೆ ಹೋಗಿದ್ದೆ. ಆಗ ಒಂದು ಯುದ್ಧ ನಡೆಯುತ್ತಿದ್ದು ದರಿಂದ, ನನ್ನ ಸ್ನೇಹಿತನಾದ ಸೈನ್ಯಾಧಿಕಾರಿ ಅಲ್ಲಿನ ದುರ್ಗದ ರಕ್ಷಣೆಗೆ ತಾನು ಮಾಡಿದ್ದ ಏರ್ಪಾಟುಗಳನ್ನು ನಾನು ಒಂದು ಸಲ ನೋಡಿ ಒಪ್ಪಬೇಕೆಂದು ನನ್ನನ್ನು ಕರೆದುಕೊಂಡು ಹೋಗಿದ್ದ. ನಾನು ಆ ದುರ್ಗದ ಮೇಲೆ ಓಡಿಯಾಡುತ್ತಿರುವಾಗ ನನ್ನ ದೂರ

ದರ್ಶಕವನ್ನು ಸುಮ್ಮನೆ ಹಾಗೆಯೇ ಶತ್ರುಗಳ ಕಡೆ ತಿರುಗಿಸಿ ನೋಡಿದೆ. ಅವರು ಒಂದು ದೊಡ್ಡ ಫಿರಂಗಿಯನ್ನು ನಮ್ಮ ಕಡೆಗೆ ತಿರುಗಿಸಿ, ಅದರೊಳಕ್ಕೆ ಮೂವತ್ತಾರು ಪೌಂಡುಗಳ ಗುಂಡನ್ನು ತುಂಬುತ್ತಿದ್ದುದು ಕಣ್ಣಿಗೆ ಬಿತ್ತು. ಒಡನೆಯೆ ಅದನ್ನು ನನ್ನ ಸ್ನೇಹಿತನಾದ ಸೈನ್ಯಾಧಿಕಾರಿಗೆ ಹೇಳಿದೆ. ಅವನೂ ದೂರದರ್ಶಕ ದಿಂದ ಅದನ್ನು ಕಂಡು, 'ಏನು ಮಾಡೋಣ?' ಎಂದ. ನಾನು ಸುತ್ತಲೂ ನೋಡಿದೆ. ನಮ್ಮ ದುರ್ಗದ ಗೋಡೆಯ ಮೇಲೂ ಒಂದು ಫಿರಂಗಿಯಿತ್ತು. ನನ್ನ ಸ್ನೇಹಿತನಿಗೆ ಹೇಳಿ, ಒಂದು ನಲುವತ್ತೆಂಟು ಪೌಂಡುಗಳ ಗುಂಡನ್ನು ತರಿಸಿ ಅದರೊಳಕ್ಕೆ ತುಂಬಿಸಿದೆ. ತುಂಬಿ ಸಿದನಂತರ ಆ ಫಿರಂಗಿಯನ್ನು ಶತ್ರುಗಳ ಕಡೆಗೆ ತಿರುಗಿಸಿ ಸಿದ್ಧ ವಾಗಿರುವಂತೆ ಹೇಳಿದೆ. ದೂರದರ್ಶಕದಿಂದ ಶತ್ರುಗಳ ಫಿರಂಗಿ ಯನ್ನೇ ನೋಡುತ್ತಿದ್ದು, ಅವರು ತಮ್ಮ ಫಿರಂಗಿಯ ಸಿಡಿಮದ್ದಿಗೆ ಬೆಂಕಿ ಮುಟ್ಟಿಸಿದ ಮರುಗಳಿಗೆಯೆ ನಮ್ಮ ಫಿರಂಗಿಯ ಸಿಡಿ ಮದ್ದಿಗೂ ಬೆಂಕಿ ಮುಟ್ಟಿಸುವಂತೆ ಆಜ್ಞೆ ಕೊಟ್ಟೆ. ಎರಡು ಗುಂಡು ಗಳೂ ಮಧ್ಯಮಾರ್ಗದಲ್ಲಿ ಒಂದನ್ನೊಂದು ತಾಕಿದುವು. ನಮ್ಮ ಗುಂಡು ಶತ್ರುಗಳ ಗುಂಡಿಗಿಂತ ಭಾರವಾಗಿದ್ದ ಕಾರಣದಿಂದ ನಮ್ಮ ಗುಂಡು ಶತ್ರುಗಳ ಗುಂಡನ್ನು ಹಿಂದಕ್ಕೆ ತಳ್ಳಿಕೊಂಡುಹೋಯಿತು. ಹಿಂದಕ್ಕೆ ಹೋದ ಆ ಗುಂಡು ಫಿರಂಗಿಯ ಪಕ್ಕದಲ್ಲಿ ಇದ್ದವನಿಗೆ ತಾಕಿ ಅವನನ್ನು ಕೊಂದಿತು. ಅದನ್ನು ಅಟ್ಟಿಸಿಕೊಂಡು ಹೋದ ನಮ್ಮ ಗುಂಡು ಶತ್ರುಗಳ ಸೈನ್ಯಾಧಿಕಾರಿಯನ್ನೂ ಅವನ ಹಿಂದೆ ಸಾಲಾಗಿ ನಿಂತಿದ್ದ ಐವತ್ತು ಮುಖ್ಯಾಧಿಕಾರಿಗಳನ್ನೂ ಒಂದೇ ಏಟಿಗೆ ತೀರಿಸಿಬಿಟ್ಟಿತು. ನಾಯಕರು ಹೀಗೆ ನಾಶವಾದುದನ್ನು ಕಂಡು ಶತ್ರುಗಳು ಚೆಲ್ಲಾಪಿಲ್ಲಿಯಾಗಿ ಓಡಿಹೋದರು.

ಹೀಗೆ ಜಿಬ್ರಾಲ್ಟರಿನ ಯುದ್ಧದಲ್ಲಿ ಜಯವನ್ನು ಸುಲಭವಾಗಿ ಸಂಪಾದಿಸುವುದಕ್ಕೆ ನಮಗೆ ಸಹಾಯ ಮಾಡಿದ ನನ್ನ ದೂರ ದರ್ಶಕವನ್ನು ನಾನು ಉತ್ತರಧ್ರುವಕ್ಕೆ ಹೋದಾಗಲೂ ತೆಗೆದು ಕೊಂಡು ಹೋಗಿದ್ದೆ. ಆದ್ದರಿಂದಲೇ ನಾವು ಧ್ರುವದ ಹತ್ತಿರ ಹೋದಾಗ, ಒಂದು ದೊಡ್ಡ ಮಂಜಿನ ಬೆಟ್ಟದ ತುದಿಯಲ್ಲಿ ಎರಡು ಬಿಳಿಯ ಕರಡಿಗಳು ಕಾದಾಡುತ್ತಿದ್ದುದು ನನಗೆ ಗೋಚರವಾ ಯಿತು. ಒಡನೆಯೆ ನಾನು ನನ್ನ ಬಂದೂಕವನ್ನು ಹೆಗಲಿಗೆ ತೂಗುಹಾಕಿಕೊಂಡು ಆ ಮಂಜಿನ ಬೆಟ್ಟವನ್ನು ಹತ್ತಿದೆ. ತುದಿಗೆ ಬಂದಾಗ ಕಾಲು ಜಾರುತ್ತಿತ್ತು. ಎದುರಿಗೆ ದೊಡ್ಡ ದೊಡ್ಡ ಬಿರುಕುಗಳು ಬಾಯಿ ತೆರೆದುಕೊಂಡಿದ್ದುವು. ನಾನು ಅವುಗಳನ್ನೂ ದಾಟಿಕೊಂಡು ಹೋದೆ. ಹಿಮದ ಮೈ ಕನ್ನಡಿಯ ಹಾಗೆ ನುಣು ಪಾಗಿ ಇದ್ದುದರಿಂದ ಆಗಾಗ್ಗೆ ಜಾರಿ ಬೀಳುತ್ತಿದ್ದರೂ ನಾನೇನೂ ಬಿಡಲಿಲ್ಲ.

ಕರಡಿಗಳ ಸಮೀಪಕ್ಕೆ ಬಂದು ಗಮನಿಸಿದರೆ, ಅವು ಜಗಳ ವಾಡುತ್ತಿರಲಿಲ್ಲ, ಆಟವಾಡುತ್ತಿದ್ದುವು. ಅವು ಎರಡೂ ಚೆನ್ನಾಗಿ ತಿಂದು ಕೊಬ್ಬಿದ ಗೂಳಿಯ ಹಾಗೆ ಪುಷ್ಟವಾಗಿದ್ದುವು. ಅವುಗಳ ಚರ್ಮವನ್ನು ಮಾರಿದರೆ ಎಷ್ಟು ಹಣ ಸಂಪಾದಿಸಬಹುದು ಎಂದು ಲೆಕ್ಕಾಚಾರ ಮಾಡುತ್ತ, ನನ್ನ ಬಂದೂಕವನ್ನು ಹೆಗಲಿಗೆ ಎತ್ತಿ ಗುರಿಯಿಟ್ಟು ಹೊಡೆಯಬೇಕೆಂದಿರುವ ಸಮಯಕ್ಕೆ ಸರಿಯಾಗಿ ನನ್ನ ಬಲಗಾಲು ಜಾರಿ, ದೊಪ್ಪನೆ ಬೆನ್ನಮೇಲೆ ಬಿದ್ದೆ. ಬಿದ್ದ ಏಟಿಗೆ ಮೂರ್ಛೆ ಹೋದೆ; ಎಚ್ಚರವಾಗಲು ಎರಡು ಗಂಟೆ ಬೇಕಾಯಿತು.

ನನಗೆ ಎಚ್ಚರವಾದಾಗ ಯಾರೋ ನನ್ನನ್ನು ಹೊತ್ತು ಕೊಂಡು ಹೋಗುತ್ತಿರುವಂತೆ ಆಯಿತು. ಕಣ್ಣುಬಿಟ್ಟು ನೋಡಿದೆ. ನನ್ನನ್ನು ಯಾರೂ ಎತ್ತಿಕೊಂಡು ಹೋಗುತ್ತಿರಲಿಲ್ಲ; ನಾನು ಕೊಲ್ಲ

ಬೇಕೆಂದಿದ್ದ ಎರಡು ಕರಡಿಗಳಲ್ಲಿ ಒಂದು ನನ್ನ ನಡುಪಟ್ಟಿಯನ್ನು ಬಾಯಲ್ಲಿ ಕಚ್ಚಿಕೊಂಡು, ನನ್ನನ್ನು ಹಿಮದಮೇಲೆ ಎಳೆದುಕೊಂಡು ಹೋಗುತ್ತಿತ್ತು. ಅದು ಕಚ್ಚಿಕೊಂಡಿದ್ದ ರೀತಿಯಲ್ಲಿ ನನ್ನ ತಲೆ ಅದರ ಹೊಟ್ಟೆಯ ಅಡಿಯಲ್ಲಿ ಇತ್ತು.

ನಾನು ಮಹಾಮತ್ಸ್ಯದ ಹೊಟ್ಟೆಯಿಂದ ಬದುಕಿಬಂದ ಮೇಲೆ ಒಂದು ಚೂರಿಯನ್ನು ಸದಾ ಸೊಂಟದಲ್ಲಿ ಸಿಕ್ಕಿಸಿಕೊಂಡಿರುತ್ತೇನೆ ಎಂದು ಹಿಂದೆಯೇ ಹೇಳಿದ್ದೆನಷ್ಟೆ. ಈಗ ಆ ಚೂರಿಯ ಜ್ಞಾಪಕವಾಯಿತು. ಒಡನೆ ಅದನ್ನು ಹೊರಗೆಳೆದು, ನನ್ನನ್ನು ಕಚ್ಚಿಕೊಂಡಿದ್ದ ಕರಡಿಯ ಹೊಟ್ಟೆಯನ್ನು ಕುಯಿದುಬಿಟ್ಟೆ. ಕರಡಿ 'ಕಿರ್ರೋ' ಎಂದು ಕಿರಿಚಿಕೊಂಡು ನನ್ನನ್ನು ಕೆಳಗೆ ಬೀಳಿಸಿಬಿಟ್ಟಿತು. ನಾನು ಥಟಕ್ಕನೆ ಎದ್ದು, ನನ್ನ ಬಂದೂಕವನ್ನೆತ್ತಿ ಹೊಡೆದು, ಅದನ್ನು ಅಲ್ಲಿಯೇ ಕೊಂದುಬಿಟ್ಟೆ.

ನಾನು ಬಂದೂಕವನ್ನು ಹೊಡೆದ ಶಬ್ದವನ್ನು ಕೇಳಿ, ಅದುವರೆಗೆ ಅಲ್ಲಿ ಮಲಗಿದ್ದ ನೂರಾರು ಕರಡಿಗಳು ಒಮ್ಮೆಗೇ ಎದ್ದು ನಿಂತುವು. ಅವು ಅಲ್ಲಿ ಮಲಗಿದ್ದುದನ್ನು ನಾನು ಗಮನಿಸಿರಲಿಲ್ಲ. ಬಿಳಿಯ ಹಿಮದಲ್ಲಿ ಬಿಳಿಯ ಕರಡಿಗಳು ಗುರುತೇ ಆಗುತ್ತಿರಲಿಲ್ಲ. ಎದ್ದ ಕರಡಿಗಳ ಕಣ್ಣಿಗೆ ನಾನು ಬಿದ್ದರೆ, ನಾನು ಬೇರೆ ಉಳಿಯುವ ಹಾಗಿರಲಿಲ್ಲ. ಏನು ಮಾಡುವುದು? ಕಣ್ಣುಮುಚ್ಚಿ ಕಣ್ಣು ತೆರೆಯುವುದರೊಳಗೆ ನಾನು ಕೊಂದ ಕರಡಿಯ ಚರ್ಮವನ್ನು ಸುಲಿದು, ತಲೆಯಿಂದ ಕಾಲಿನವರೆಗೂ ಅದನ್ನೇ ಹೊದೆದು ತೆಪ್ಪಗೆ ನಿಂತುಬಿಟ್ಟೆ. ಕರಡಿಗಳು ಒಂದೊಂದಾಗಿ ಹತ್ತಿರ ಬಂದು ಮೂಸಿ ನೋಡಿದುವು. ನಾನೂ ಉಸಿರಾಡದೆ ನಿಂತೆ. ಹಸಿಯ ಕರಡಿಯ ವಾಸನೆ ಇನ್ನೂ ಚರ್ಮಕ್ಕೆ ಅಂಟಿಕೊಂಡಿದ್ದುದರಿಂದ ಕರಡಿಗಳು ನನ್ನನ್ನೂ ಒಂದು ಕರಡಿ ಎಂದು ತಿಳಿದುಕೊಂಡವು. ಸುತ್ತಲೂ

ಇದ್ದ ಗಡವ ಕರಡಿಗಳ ಹಾಗೆ ನನ್ನ ಮೈ ಬೆಳೆದಿರಲಿಲ್ಲವಾದರೂ ನನ್ನನ್ನು ನೋಡಿದರೆ ಮರಿಕರಡಿ ಎನ್ನಬಹುದಾಗಿತ್ತು. ಅಂತೂ ನನ್ನನ್ನೂ ತಮ್ಮವನೇ ಎಂದು ಅವು ಭಾವಿಸಿಕೊಂಡವು. ಆದರೆ, ಅದೇನು ಗುದ್ದಾಟ! ಏನು ಗುರುಗುಟ್ಟಾಟ! ಆ ಆಟದಲ್ಲಿ ನಾನು ಅವುಗಳನ್ನು ಮೀರಿಸುವುದು ಸಾಧ್ಯವಾಗದಿದ್ದರೂ, ಅವುಗಳು ನನ್ನಲ್ಲಿರಿಸಿದ್ದ ನಂಬಿಕೆಯಿಂದ ನಾನು ಹೇಗೆ ಹಣ ಸಂಪಾದಿಸಬಹುದೆಂದು ಎಣಿಕೆಮಾಡುತ್ತಿದ್ದೆ.

ಹಿಂದೆ ನಾವು ಹುಡುಗರಾಗಿದ್ದ ಕಾಲದಿಂದಲೂ ನಮಗೆ ಒಂದು ವಿಷಯ ಕಲಿಸಿದ್ದರು. ಏನೆಂದರೆ, ಕತ್ತಿನ ಮೇಲೆ ಒಂದು ಕತ್ತಿಯೇಟು ಕೊಟ್ಟರೆ ತಟ್ಟನೆ ಸಾಯುತ್ತಾರೆ ಎಂದು. ನಾನು ಅದನ್ನೇ ಜ್ಞಾಪಕದಲ್ಲಿಟ್ಟುಕೊಂಡು, ಒಂದೊಂದು ಕರಡಿಯೂ ಆಟವಾಡುತ್ತ ಒಂದೊಂದು ಏಟು ಗುದ್ದಿದಾಗಲೂ ನಾನೂ ನನ್ನ ಕೈಯ ಚಾಕುವಿನಿಂದ ಅದರ ಕುತ್ತಿಗೆಯ ಮೇಲೆ ಒಂದು ಕೆತ್ತುತ್ತಿದ್ದೆ. ಅದು ತಟ್ಟನೆ ಸತ್ತು ಬೀಳುತ್ತಿತ್ತು. ಹೀಗೇ ಮಾಡಿ ಅಲ್ಲಿದ್ದ ನೂರಾರು ಕರಡಿಗಳಲ್ಲಿ ಒಂದನ್ನೂ ಬಿಡದ ಹಾಗೆ ಎಲ್ಲವನ್ನೂ ನಾನೊಬ್ಬನೇ ಒಂದೇ ಚಾಕುವಿನಿಂದ ಕೊಂದು ಕೆಡವಿದೆ.

ಆ ವೇಳೆಗೆ ನನ್ನ ಹಡಗಿನವರು ನಾನು ಎಲ್ಲಿ ಹೋದೆನೋ ಎಂದು ಹುಡುಕುತ್ತ ಬಂದು, ನಾನು ನಡೆಸಿದ್ದ ಅದ್ಭುತ ಕಾರ್ಯವನ್ನು ಕಂಡು ಆಶ್ಚರ್ಯದಿಂದ ಮೂಗಿನಮೇಲೆ ಬೆರಳಿಟ್ಟುಕೊಂಡರು. ನಾನು ಅವರ ಸಹಾಯದಿಂದ ಆ ಕರಡಿಗಳ ದೇಹಗಳನ್ನೆಲ್ಲಾ ಹಡಗಿಗೆ ಸಾಗಿಸಿಕೊಂಡು ಹೋದೆ. ನಾವು ಉತ್ತರಧ್ರುವದಲ್ಲಿ ಇದ್ದ ಕಾಲದಿಂದ ಊರಿಗೆ ಹಿಂದಿರುಗಿ ಬರುವ ವರೆಗೂ ಕರಡಿಯ ಮಾಂಸವನ್ನು ದಿನಕ್ಕೆ ಮೂರು ಸಾರಿ ತೃಪ್ತಿಯಾಗುವ ತನಕ ತಿಂದೆವು. ಆದರೂ ಇನ್ನೂ ಬೆಟ್ಟದಷ್ಟು ಮಾಂಸ

ಮಿಕ್ಕಿತ್ತು. ಊರಿಗೆ ಬಂದಮೇಲೆ ಅದನ್ನು ಅಲ್ಲಿನ ಬಡವರಿಗೆಲ್ಲಾ ಉಚಿತವಾಗಿ ಹಂಚಿಬಿಟ್ಟೆವು. ಆದರೆ ಕರಡಿಯ ಚರ್ಮಗಳನ್ನು ಮಾತ್ರ ಹಣಕ್ಕೆ ಮಾರಿ, ಬಂದುದನ್ನು ನಾವೆಲ್ಲರೂ ಹಂಚಿಕೊಂಡೆವು. ಹೀಗೆ ಕರಡಿಗಳ ಸಂಹಾರದ ಪ್ರಸಂಗದಿಂದ ಹಣ ಎಲ್ಲರಿಗೂ ಬಂದರೂ ಕೂಡ ಶಾಶ್ವತವಾದ ಹೆಸರು ಬಂದದ್ದು ನನಗೆ ಒಬ್ಬನಿಗೆ ಮಾತ್ರ. ಅದನ್ನು ಮಾತ್ರ ಒಬ್ಬನು ಇನ್ನೊಬ್ಬನಿಗೆ ಹಂಚಿಕೊಡುವುದು ಸಾಧ್ಯವಿಲ್ಲ.

## ನಾನು ಹಕ್ಕಿಯಂತೆ ಹಾರಿದ್ದು

ನಾನು ಹಕ್ಕಿಯ ಹಾಗೆ ರೆಕ್ಕೆ ಬೀಸಿಕೊಂಡು ಹಾರಿದ್ದು ನಿಮಗೆ ಗೊತ್ತೇನು? ಗೊತ್ತಿಲ್ಲವೆ? ಹೇಳುತ್ತೇನೆ, ಕೇಳಿ.

ನಾನು ಜಿಬ್ರಾಲ್ಟರಿಗೆ ಹೋಗಿದ್ದುದನ್ನು ಹಿಂದೆ ಹೇಳಿದೆನಲ್ಲವೆ; ಆ ಪ್ರವಾಸದಲ್ಲಿ ನಾನು ಫ್ರಾನ್ಸಿನ ಮೂಲಕವಾಗಿ ಇಂಗ್ಲೆಂಡಿಗೆ ಹೋದೆ. ಹೋಗುವಾಗ ದಾರಿಯಲ್ಲಿ ಕೆಲೆ ಎಂಬ ಒಂದು ಬಂದರು ಇದೆ. ಅಲ್ಲಿದ್ದ ಒಂದು ಹಡಗಿನಲ್ಲಿ ಅನೇಕ ಜನ ಇಂಗ್ಲಿಷು ಸೈನಿಕರನ್ನು ಸೆರೆ ಹಿಡಿದು ಇಟ್ಟಿದ್ದರೆಂದು ನನಗೆ ವರ್ತಮಾನ ಬಂತು. ಇಂಗ್ಲಿಷಿನವರೆಂದರೆ ನನಗೆ ಯಾವಾಗಲೂ ತುಂಬ ಅಭಿಮಾನ. ಅವರೂ ನನ್ನ ಹಾಗೆಯೇ ಶೂರರು, ವೀರರು.

ಅಂಥವರು ಸೆರೆಯಾಳುಗಳಾಗಿ ಕೊಳೆಯುತ್ತ ಬಿದ್ದಿರುವುದು ನನಗೆ ಸರಿತೋರಲಿಲ್ಲ. ಹೇಗಾದರೂ ಮಾಡಿ ಅವರನ್ನು ಸೆರೆಯಿಂದ ಬಿಡಿಸಬೇಕೆಂದು ನಿಶ್ಚಯಮಾಡಿದೆ. ಅದಕ್ಕೋಸ್ಕರ ದೊಡ್ಡದೊಡ್ಡ ಮರದ ಪಟ್ಟಿಗಳನ್ನೂ ದಪ್ಪನಾದ ಬಟ್ಟೆಯನ್ನೂ ತಂದು, ನಲುವತ್ತು ಮೊಳ ಉದ್ದ ಹದಿನೆಂಟು ಮೊಳ ಅಗಲವಾದ ಎರಡು ರೆಕ್ಕೆಗಳನ್ನು ಮಾಡಿ, ಎರಡು ಭುಜಗಳಿಗೂ ಭದ್ರ

ವಾಗಿ ಸಿಕ್ಕಿಸಿಕೊಂಡೆ. ಒಂದು ದಿನ ಇನ್ನೂ ಸೂರ್ಯ ಉದಯಿಸುವುದಕ್ಕೆ ಮುಂಚಿತವಾಗಿಯೇ ಎದ್ದು, ರೆಕ್ಕೆಗಳನ್ನು ಸಿಕ್ಕಿಸಿಕೊಂಡು, ಬೀಸಿ ಬೀಸಿ, ಆಕಾಶಮಾರ್ಗದಲ್ಲಿ ಹೋಗಿ, ಆ ಇಂಗ್ಲಿಷು ಸೆರೆಯಾಳುಗಳು ಇದ್ದ ಹಡಗಿನ ಮೇಲುಭಾಗದಲ್ಲಿ ರೆಕ್ಕೆಯಾಡಿಸುತ್ತ ನಿಂತೆ.



ಹಡಗು ಮೇಲೆ ಬಂತು

ಬರುವಾಗ ಜೊತೆಯಲ್ಲಿಯೇ ಎರಡು ಮೂರು ಕಬ್ಬಿಣದ ಸರಪಣಿಗಳನ್ನೂ ತಂದಿದ್ದೆ. ಅವುಗಳ ತುದಿಗೆ ಜೋಡಿಸಿದ್ದ ಕೊಕ್ಕೆಗಳನ್ನು ಹಡಗಿನ ಕಂಬಗಳಿಗೆ ತಗುಲಿಸಿ, ಎಳೆದು ನೋಡಿದೆ. ಅವು ಭದ್ರವಾಗಿ ಬಿಗಿದುಕೊಂಡಿದ್ದುವೆಂದು ತಿಳಿದುಬಂದ ಮೇಲೆ, ರೆಕ್ಕೆಗಳನ್ನು ಬಡಿಯುತ್ತ ಮೇಲೆದ್ದೆ. ನಾನು ಮೇಲೆ ಹೋದಹಾಗೆಲ್ಲಾ ನನ್ನ ಕೈಯಲ್ಲಿದ್ದ ಸರಪಣಿಗಳ ತುದಿಗೆ ಸಿಕ್ಕಿದ್ದ ಸೆರೆಯಾಳುಗಳ ಹಡಗೂ ನೀರಿನಿಂದ ಮೇಲೆದ್ದುಬಂತು. ಹಾಗೆಯೇ ಅದನ್ನು ಎತ್ತಿಕೊಂಡು ಹೋಗಿ ಇಂಗ್ಲಿಷಿನವರ ಒಂದು ಬಂದರಿನಲ್ಲಿ ಅದನ್ನು ಇಳಿಸಿದೆ.

ಸೆರೆಯಾಳುಗಳು ಬೆಳಗ್ಗೆ ಕಣ್ಣುಬಿಟ್ಟು ನೋಡಿ, ನಿಜಸ್ಥಿತಿಯನ್ನು ತಿಳಿದಾಗ, ಅವರ ಆನಂದಕ್ಕೆ ಪಾರವೇ ಇಲ್ಲದೆಹೋಯಿತು. ನನ್ನನ್ನು ಅವರು ತುಂಬ ಹೊಗಳಿದರು, ಗೌರವಿಸಿದರು. ನನ್ನ ರೆಕ್ಕೆಗಳಿಂದ ಆಗಬೇಕಾಗಿದ್ದ ಕೆಲಸ ಆದಮೇಲೆ ಅದನ್ನು ಏನು ಮಾಡಬೇಕೋ ತಿಳಿಯಲಿಲ್ಲ. ಅದನ್ನು ಆ ಸೆರೆಯಾಳುಗಳಿಗೇ ಕೊಟ್ಟುಬಿಟ್ಟೆ. ಅವರು ಅದನ್ನು ತಮ್ಮ ಆಯುಧಶಾಲೆಯ ಒಂದು ಮಂಟಪದಲ್ಲಿಟ್ಟು ಈ ಹೊತ್ತಿಗೂ ಪೂಜೆ ಮಾಡುತ್ತಿದ್ದಾರೆ ಎಂದು ಕೇಳಿದ್ದೇನೆ. ನಾನಂತೂ ನೋಡಿಲ್ಲ, ಕೇಳಿದ್ದೇನೆ.

## ನನ್ನ ಬೇಟೆನಾಯಿ

ನಾನು ಮೃಗಗಳ ಬೇಟೆಯಾಡುತ್ತೇನೆಂಬುದನ್ನೂ ಹಕ್ಕಿಗಳ ಬೇಟೆಯಾಡುತ್ತೇನೆ ಎಂಬುದನ್ನೂ ನೀವು ಇದುವರೆಗೆ ಆಗಲೇ ಕೇಳಿದ್ದೀರಿ. ಆದರೆ ನನ್ನ ಬೇಟೆ ಸಫಲವಾಗುವುದಕ್ಕೆ ನನಗೆ ಸಹಾಯಮಾಡುತ್ತಿದ್ದ ನನ್ನ ಬೇಟೆನಾಯಿಯ ವಿಚಾರವಾಗಿ ಇದುವರೆಗೆ ಏನೂ ಹೇಳಿಲ್ಲ, ಅಲ್ಲವೆ? ಅದು ಅಗತ್ಯವಾಗಿ ನಾನು ಹೇಳಬೇಕಾದ ವಿಚಾರ, ನೀವು ಕೇಳಬೇಕಾದ ವಿಚಾರ.

ಕೆಲವು ನಾಯಿಗಳು ನೆಲದ ಮೇಲೆ ಓಡಿಯಾಡುವ ಪ್ರಾಣಿಗಳ ವಾಸನೆಯನ್ನು ಕಂಡುಕೊಳ್ಳಬಲ್ಲವು, ಇನ್ನು ಕೆಲವು ನೀರಿನ ಒಳಗೆ ಓಡಿಯಾಡುವ ಪ್ರಾಣಿಗಳ ವಾಸನೆ ತಿಳಿಯಬಲ್ಲವು, ಮತ್ತೆ ಕೆಲವು ಆಕಾಶದಲ್ಲಿ ಹಾರುವ ಹಕ್ಕಿಗಳ ವಾಸನೆ ಹಿಡಿಯಬಲ್ಲವು. ಆದರೆ ನನ್ನ ಬೇಟೆನಾಯಿಗೆ ಮಾತ್ರ ಈ ಮೂರೂ ತೆರದ ಶಕ್ತಿ ಇತ್ತು. ಆದ್ದರಿಂದಲೇ ಅದಕ್ಕೆ ನಾವು "ನೋಸಿ" ಎಂದು ಹೆಸರಿಟ್ಟಿದ್ದೆವು. ಇಂಗ್ಲಿಷಿನಲ್ಲಿ "ನೋಸಿ" ಎಂದರೆ 'ಮೂಗಿರತಕ್ಕದ್ದು' ಎಂದು ಅರ್ಥ. ಬೇಕಾದರೆ, 'ಮೂಗಣ್ಣ' ಎಂದು ನನ್ನ ನಾಯನ್ನು ನೀವು ಕರೆಯಬಹುದು.

ಈ ನಾಯಿಯ ಅದ್ಭುತವಾದ ವಾಸನಾಶಕ್ತಿಯನ್ನು ಕುರಿತು ನಿಮಗೆ ಒಂದು ಕಥೆ ಹೇಳುತ್ತೇನೆ, ಕೇಳಿ.

ಒಂದು ಸಲ ನಾನು ನನ್ನ ಕೆಲವು ಸ್ನೇಹಿತರೊಡನೆ ಸಮುದ್ರಯಾನ ಹೊರಟಿದ್ದೆ. ನನ್ನ ನಾಯಿ ಮೂಗಣ್ಣ ಕೂಡ ನನ್ನ ಜೊತೆಯಲ್ಲಿಯೇ ಇತ್ತು. ಒಂದು ದಿವಸ ನಾವು ಸಮುದ್ರದ ಮಧ್ಯೆ, ನೆಲದಿಂದ ಮುನ್ನೂರು ಮೈಲಿಗಳ ದೂರದಲ್ಲಿ ಇರುವಾಗ ನನ್ನ ನಾಯಿ ಮೂಗಣ್ಣ ಆಕಾಶದಲ್ಲಿ ಏನನ್ನೋ ಮೂಸಿನೋಡುತ್ತ ಸುಮ್ಮನೆ ಓಡಿಯಾಡಿತು.

ಆ ನಾಯಿಯ ಪದ್ಧತಿ ನನಗೆ ಗೊತ್ತಿತ್ತು. ನೆಲದ ಪ್ರಾಣಿಗಳ ಸುಳಿವು ತಿಳಿದರೆ, ಅದು ನೆಲವನ್ನು ಮೂಸಿನೋಡುತ್ತಿತ್ತು; ನೀರಿನ ಪ್ರಾಣಿಗಳ ವಾಸನೆ ಕಂಡರೆ, ನೀರಿಗೆ ಮೂಗು ತಾಗಿಸುತ್ತಿತ್ತು; ಪಕ್ಷಿಗಳ ಗಾಳಿ ಬೀಸಿದರೆ, ಆಕಾಶದಲ್ಲಿ ಮೂಸಿನೋಡುತ್ತಿತ್ತು. ಆದ್ದರಿಂದ, ಅದು ಆಕಾಶದಲ್ಲಿ ವಾಸನೆ ನೋಡುತ್ತಿದ್ದುದನ್ನು ಕಂಡು, 'ಇಲ್ಲಿ ಎಲ್ಲಿಯೋ ಹಕ್ಕಿ ಇರಬೇಕು' ಎಂದು ನನಗೆ

ಎನ್ನಿಸಿತು. ಆದರೆ ಆಕಾಶದಲ್ಲಿ ಎಲ್ಲಿ ನೋಡಿದರೂ ಹಕ್ಕಿಯೆನ್ನ ಬಹುದಾದ ಒಂದು ಚುಕ್ಕಿಯೂ ಕಾಣಿಸಲಿಲ್ಲ.

"ಇದೇನಿದು? ಮೂಗಣ್ಣ ಎಂದಿಗೂ ತಪ್ಪು ಮಾಡುವುದಿಲ್ಲ. ಈ ಹೊತ್ತು ಏಕೆ ಹೀಗೆ ಆಡುತ್ತಿದೆ?" ಎಂದು ನಾನು ಚಿಂತಿಸುತ್ತಿರುವಾಗಲೇ, ಅದುವರೆಗೂ ಆಕಾಶದಲ್ಲಿ ಮೂಸಿನೋಡುತ್ತಿದ್ದ ನಾಯಿ ತಟಕ್ಕನೆ ಹಡಗಿನ ಅಂಚಿಗೆ ಹೋಗಿ, ನೀರಿನ ಕಡೆ ಮೂಸಿ ನೋಡತೊಡಗಿತು. ಆಗ ಅದರ ಮೂಗು ತೋರಿಸುತ್ತಿದ್ದ ಕಡೆ ಕುರಿತು ನೋಡಿದೆ. ಷಾರ್ಕ್ ಎಂಬ ಒಂದು ಜಾತಿಯ ರಾಕ್ಷಸ ಮೀನು ಹಡಗನ್ನು ಅಟ್ಟಿಸಿಕೊಂಡು ಬರುತ್ತಿತ್ತು. ಆಗ ನನಗೆ "ಓಹೋ! ಈ ರಾಕ್ಷಸ ಮೀನು ಯಾವುದೋ ಹಕ್ಕಿಯನ್ನು ಜೀವ ಸಹಿತವಾಗಿ ನುಂಗಿರಬೇಕು! ಆದ್ದರಿಂದಲೇ ನನ್ನ ಮೂಗಣ್ಣ ಹೀಗೆ ಮೂಸಿನೋಡುತ್ತಿದೆ!" ಎಂದು ಹೊಳೆಯಿತು. "ನನ್ನ ಮೂಗಣ್ಣ ಎಂದಿಗೂ ತಪ್ಪುಮಾಡುವುದಿಲ್ಲ" ಎಂದು ಸಂತೋಷವಾಯಿತು.

ಒಡನೆಯೇ ಹಡಗಿನ ಯಜಮಾನನ ಹತ್ತಿರಕ್ಕೆ ಓಡಿದೆ. ಅವನು ನನ್ನ ಸ್ನೇಹಿತ. "ಅಯ್ಯಾ, ಈ ಹೊತ್ತಿನ ಮಧ್ಯಾಹ್ನದ ಊಟಕ್ಕೆ ಯಾವುದಾದರೂ ಹಕ್ಕಿಯನ್ನು ಹಿಡಿದು ಕೊಟ್ಟರೆ ನೀನು ನನಗೆ ಏನು ಕೊಡುತ್ತೀಯೆ?" ಎಂದು ಕೇಳಿದೆ.

ಅದಕ್ಕೆ ಅವನು "ನಿನಗೆ ಬುದ್ಧಿ ಸರಿಯಾಗಿ ಇದೆಯೋ, ಇಲ್ಲವೋ? ಭೂಮಿಯಿಂದ ಮುನ್ನೂರು ಮೈಲು ದೂರದಲ್ಲಿದ್ದೇವೆ, ಆಕಾಶದಲ್ಲಿ ಒಂದು ಚಿಕ್ಕ ಚುಕ್ಕಿಯೂ ಇಲ್ಲ. ನಿನಗೆ ಹಕ್ಕಿ ಎಲ್ಲಿಂದ ಬರಬೇಕು?" ಎಂದ.

"ಅದೆಲ್ಲಾ ನಿನಗೇಕೆ? ಇನ್ನು ಅರ್ಧಗಂಟೆಯೊಳಗಾಗಿ ನಾನು ಅಡುಗೆಗೆ ಬೇಕಾದ ಹಕ್ಕಿ ಹಿಡಿದು ಕೊಟ್ಟರೆ ನನಗೆ ನೂರು

ತೊಲ ಚಿನ್ನ ಕೊಡುವೆಯ? ಹಿಡಿದು ಕೊಡದಿದ್ದರೆ ನಾನು ನಿನಗೆ ನೂರು ತೊಲ ಕೊಡುತ್ತೇನೆ" ಎಂದೆ.

ಅದಕ್ಕೆ ಅವನು ನಮ್ಮ ಸ್ನೇಹಿತರನ್ನೆಲ್ಲ ಕರೆದು, "ಇವನಿಗೆ ಬುದ್ಧಿಭ್ರಮಣೆಯಾಗಿದೆ. ಆದರೂ ಇವನಿಟ್ಟ ಪಣವನ್ನು ನಾನು ಒಪ್ಪಿಕೊಳ್ಳುತ್ತೇನೆ. ಇವನ ಮೂರ್ಖತನವನ್ನು ಇವನಿಗೆ ತೋರಿಸಿದ ಮೇಲೆ, ಇವನ ಚಿನ್ನವನ್ನು ಇವನಿಗೇ ಕೊಟ್ಟರಾಯಿತು" ಎಂದು ಒಪ್ಪಿಕೊಂಡನು.

ನಾನೂ ಅವರ ಹತ್ತಿರ ಅದು ಇದು ಏನೇನೋ ಮಾತಾಡುತ್ತ ಇದ್ದು, ಹಡಗನ್ನು ಅಟ್ಟಿಬರುತ್ತಿದ್ದ ಷಾರ್ಕನ್ನು ಆಗ ತಾನೆ ಕಂಡವನ ಹಾಗೆ "ಅದೋ, ಅದೋ! ಭಾರಿ ಷಾರ್ಕ್! ಈಟಿ ತನ್ನಿ! ಅದನ್ನು ಹಿಡಿಯೋಣ!" ಎಂದು ಕೂಗಿದೆ.

"ಓಹೊ! ಇದೇಯೋ ನೀನು ಹೇಳುತ್ತಿದ್ದ ಹಕ್ಕಿ!" ಎಂದು ಹಡಗಿನ ಯಜಮಾನನು ನನ್ನನ್ನು ನೋಡಿ ನಗುತ್ತ, "ಎಲ್ಲಿ! ಈಟಿ ತಂದು ಆ ಷಾರ್ಕನ್ನು ಹೊಡೆಯಿರಿ!" ಎಂದು ತನ್ನ ನಾವಿಕರಿಗೆ ಆಜ್ಞೆಮಾಡಿದ.

ಐದು ಹತ್ತು ನಿಮಿಷಗಳೊಳಗಾಗಿ ಆ ಷಾರ್ಕ್ ಈಟಿಯ ಏಟಿಗೆ ಸತ್ತುಬಿತ್ತು. ಅದನ್ನು ಹಡಗಿನ ಮೇಲೆ ಎಳೆದು ಹಾಕಿದರು. ನಾನು ನನ್ನ ಪ್ರಸಿದ್ಧವಾದ ಚೂರಿಯನ್ನು ಒರೆಯಿಂದ ತೆಗೆದು, ಆ ಷಾರ್ಕಿನ ಹೊಟ್ಟೆಯನ್ನು ಸೀಳಿದೆ. ಛಿಲ್ಲೆಂದು ಚಿಮ್ಮಿದ ರಕ್ತದೊಡನೆಯೇ ರಕ್ತದಲ್ಲಿ ಸ್ನಾನಮಾಡಿ ಕೆಂಪಗಾದ ಒಂದು ದೊಡ್ಡ ಬಾತುವೂ ಐದು ಮರಿಬಾತುಗಳೂ ಹೊರಗೆ ಬಂದುವು!

ಹಡಗಿನ ಯಜಮಾನನ ಮುಖ ನೋಡಿದೆ. ಅವನು ತನ್ನ ಕಣ್ಣನ್ನೇ ತಾನು ನಂಬಲಾರದೆ ನಿಂತಿದ್ದ. ಕಡೆಗೆ ಬಾತುಗಳು

*

ಶಬ್ದಮಾಡಿದುದನ್ನು ಕೇಳಿ, ತಾನು ಆಡಿದ ಮಾತಿನ ಪ್ರಕಾರ ನೂರು ತೊಲ ಚಿನ್ನವನ್ನು ನನಗೆ ಕೊಡಲು ಬಂದ. ನಾನು ಅದನ್ನು ತೆಗೆದುಕೊಳ್ಳಲಿಲ್ಲ. "ಸುಮ್ಮನೆ ವಿನೋದಕ್ಕಾಗಿ ಪಣ ತೊಟ್ಟದ್ದು" ಎಂದುಬಿಟ್ಟೆ. "ಷಾರ್ಕಿನ ಹೊಟ್ಟೆಯಲ್ಲಿ ಹಕ್ಕಿ ಯಿದ್ದುದು ನಿನಗೆ ಹೇಗೆ ಗೊತ್ತಾಯಿತು?" ಎಂದು ಎಲ್ಲರೂ ಆಶ್ಚರ್ಯಪಟ್ಟರು. ಮೂಗಣ್ಣನ ಕಡೆಗೆ ನಾನು ಕೈತೋರಿಸಿದಾಗ ಅವರ ಆಶ್ಚರ್ಯಕ್ಕೆ ಮಿತಿಯಿಲ್ಲದೆ ಹೋಯಿತು. ಚೀಲಚೀಲ ಗಳಲ್ಲಿ ಚಿನ್ನವನ್ನು ಸುರಿದು, ಮೂಗಣ್ಣನನ್ನು ಕೊಂಡುಕೊಳ್ಳುವು ದಕ್ಕೆ ನಾನು ತಾನೆಂದು ಮುಂದೆ ಬಂದರು. ಆದರೆ ನಾನು ಅಂಥ ನಾಯನ್ನು ಮಾರಿಯೇನೆ! ಎಷ್ಟು ಚಿನ್ನ ಸುರಿದರೂ ಅಂಥ ನಾಯಿ ಎಲ್ಲಿ ದೊರಕೀತು!

ಷಾರ್ಕಿನ ಹೊಟ್ಟೆಯಲ್ಲಿ ಸಿಕ್ಕಿದ ದೊಡ್ಡ ಬಾತನ್ನು ಆ ದಿನ ಮಧ್ಯಾಹ್ನದ ಅಡುಗೆಗೆ ಉಪಯೋಗಿಸಿಕೊಂಡೆವು. ಉಳಿದ ಮರಿಗಳು ಇನ್ನೂ ಬಹಳ ಸಣ್ಣವಾಗಿದ್ದುವು. ತಾಯಿಬಾತಿನ ಆರೈಕೆಯಿಲ್ಲದೆ ಅವು ಏನಾಗುವುವೋ ಎಂದು ನಾವು ಚಿಂತಿಸುತ್ತಿ ದ್ದಾಗ ಹಡಗಿನಲ್ಲಿದ್ದ ಬೂದುಬಣ್ಣದ ಬೆಕ್ಕು ಆ ಮರಿಗಳಿಗೆ ತಾನು ಹಾಲು ಕುಡಿಸುವುದಕ್ಕೆ ಮುಂದೆ ಬಂತು. ಮರಿಗಳೂ ಅದನ್ನೇ ತಮ್ಮ ತಾಯಿಯೆಂದು ತಿಳಿದು, ಸುಖವಾಗಿ ಹಾಲು ಕುಡಿಯುತ್ತ ಬೆಳೆದುವು.

## ಚಂದ್ರಲೋಕದ ಪರಿಚಯ

ನಾನು ಟರ್ಕಿದೇಶದಲ್ಲಿ ಸೆರೆಸಿಕ್ಕಿ ಗುಲಾಮನಾಗಿದ್ದಾಗ ನನ್ನ ಬೆಳ್ಳಿಯ ಕೊಡಲಿಯನ್ನು ಹುಡುಕಿಕೊಂಡು ಬರುವುದಕ್ಕಾಗಿ ನಾನು ಚಂದ್ರಲೋಕಕ್ಕೆ ಹೋಗಿದ್ದ ಕಥೆಯನ್ನು ನಿಮಗೆ ಈ ಮೊದಲೇ ಹೇಳಿದ್ದೇನೆ. ಆದರೆ ಆ ಸಲ ನನ್ನ ಕೊಡಲಿಯನ್ನು ಹುಡುಕುವ

ಪರದಾಟದಲ್ಲಿ ನಾನು ಬೇರೆ ಏನನ್ನೂ ಗಮನಿಸಲಿಲ್ಲ. ಆದಕ್ಕೋಸ್ಕರ ಇನ್ನೊಂದು ಸಲ ಹೋಗಬೇಕೆಂಬ ಆಸೆಯಿತ್ತು. ಅದು ಹೇಗೋ ದೈವೇಚ್ಛೆಯಿಂದ ಈಡೇರಿತು. ಅಲ್ಲಿ ನಾನು ಕಂಡುದನ್ನು ಹೇಳುತ್ತೇನೆ, ಕೇಳಿ.

ನಾನು ದೇಶ ದೇಶಾಂತರಗಳನ್ನು ಸುತ್ತಿಬಂದು, ತುಂಬ ಅನುಭವ ಪಡೆದಿರುವ ಮಹಾ ಸಾಹಸಿಯೆಂದು ಹೆಸರು ಪಡೆದಿದ್ದ ಕಾರಣ, ನಮ್ಮ ಹಾಲೆಂಡ್ ಸರಕಾರವು ಹೊಸದೇಶಗಳನ್ನು ಕಂಡು ಹಿಡಿಯುವ ಕಾರ್ಯಕ್ಕೆ ನನ್ನನ್ನೇ ನೇಮಿಸಿತು. ಹೊಸ ಹೊಸ ದೇಶಗಳನ್ನು ಕಂಡುಹಿಡಿದರೆ ಅದರಿಂದ ನಮ್ಮ ದೇಶದ ಕೀರ್ತಿಯೂ ಹೆಚ್ಚುತ್ತದೆ ಎಂಬ ದೇಶಾಭಿಮಾನದಿಂದ ನಾನೂ ಒಪ್ಪಿಕೊಂಡೆ. ಅದಕ್ಕಾಗಿಯೇ ಒಂದು ದೊಡ್ಡ ಹಡಗನ್ನು ಸಿದ್ಧಪಡಿಸಿಕೊಂಡು 'ಸಮುದ್ರದ ನಡುವೆ ಹೊಸ ದೇಶಗಳು ಎಲ್ಲಿವೆ?' ಎಂದು ಹುಡುಕಿಕೊಂಡು ಮಹಾ ಪರಿವಾರದೊಡನೆ ಹೊರಟೆ.

ಸುಮಾರು ಹದಿನೈದು ದಿವಸ ನಾವು ಕ್ಷೇಮವಾಗಿ ಪ್ರಯಾಣ ಮಾಡಿದೆವು. ಆದರೆ ಹದಿನಾರನೆಯ ಮಧ್ಯಾಹ್ನ ಒಂದು ಅಸಾಧ್ಯವಾದ ಸುಂಟರಗಾಳಿ ಹುಟ್ಟಿ, ಹಡಗನ್ನು ಬಲವಾಗಿ ಹಿಡಿದು, ಗಿರ್ರನೆ ತಿರುಗಿಸುತ್ತ ಮೇಲುಮೇಲಕ್ಕೆ ಆಕಾಶ ಮಾರ್ಗದಲ್ಲಿ ಎತ್ತಿಕೊಂಡು ಹೋಯಿತು.

ಹೀಗೇ ಸುಮಾರು ಆರು ವಾರ ವಾಯುಮಾರ್ಗದಲ್ಲಿ ನಾವು ಮೇಲೆ ಹೋದ ಬಳಿಕ ಫಳಫಳನೆ ಹೊಳೆಯುವ ಒಂದು ಗುಂಡಾದ ಬೆಳ್ಳಿಯ ದ್ವೀಪ ಗೋಚರವಾಯಿತು. ಗಾಳಿ ಆ ದ್ವೀಪದ ಹತ್ತಿರಕ್ಕೆ ನಮ್ಮ ಹಡಗನ್ನು ತೂರಿಕೊಂಡು ಬಂದು, ಅಲ್ಲಿನ ಒಂದು ಬಂದರಿನಲ್ಲಿ ಇಳಿಸಿತು.

ನಾನು, ನಮ್ಮ ಭೂಮಿಯ ಮೇಲಿದ್ದಾಗ, 'ಚಂದ್ರಲೋಕದಲ್ಲಿ ಜನರಿದ್ದಾರೆ' ಎಂದು ಹೇಳಿದರೆ, ನಂಬುತ್ತಿರಲಿಲ್ಲ. ಆದರೆ ಈಗ ಕಣ್ಣಾರೆ ಕಂಡ ಮೇಲೆ, ನಂಬಬೇಕಾಯಿತು. ಅಲ್ಲಿ ಚಂದ್ರಲೋಕದಲ್ಲಿ ನಿಂತು ಕೆಳಗಡೆ ನೋಡಿದರೆ, ನಾವು ಬಿಟ್ಟು ಬಂದ ಭೂಮಿ ಒಂದು ದೊಡ್ಡ ಮಣ್ಣಿನ ಉಂಡೆಯಂತೆ ಕಾಣುತ್ತಿತ್ತು. ಅಲ್ಲಿನ ಊರು, ಬೆಟ್ಟ, ಕಾಡು, ನದಿ ಮುಂತಾದುವು ಸಣ್ಣಸಣ್ಣಗೆ ಕಾಣುತ್ತಿದ್ದರೂ ಕೂಡ, ಅಲ್ಲಿ ಮನುಷ್ಯರಿದ್ದಾರೆ ಎಂದು ಹೇಳಿದರೆ ನಂಬುವ ಹಾಗಿರಲಿಲ್ಲ.

ನಾವು ಚಂದ್ರಲೋಕದಲ್ಲಿ ಕಂಡ ಮೊದಲನೆಯ ದೃಶ್ಯ ಬಹಳ ಭಯಂಕರವಾಗಿತ್ತು. ಬೃಹದಾಕಾರದ ಹಕ್ಕಿಗಳ ಮೇಲೆ ಬೃಹದಾಕಾರದ ಮನುಷ್ಯರು ಸವಾರಿಮಾಡುತ್ತಿದ್ದರು. ಆ ಹಕ್ಕಿ ಹದ್ದಿನ ಹಾಗಿತ್ತು. ಒಂದೊಂದು ಹಕ್ಕಿಗೂ ಮೂರು ಮೂರು ತಲೆ. ಅದು ಹಾರಲು ರೆಕ್ಕೆ ಬಿಚ್ಚಿದಾಗ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಅಳೆದರೆ ಎರಡು ತೆಂಗಿನ ಮರದ ಎತ್ತರಕ್ಕೆ ಸಮನಾಗುತ್ತಿತ್ತು. ನಾವು ಭೂಮಿಯಲ್ಲಿ ಕುದುರೆಯ ಮೇಲೆ ಸವಾರಿಮಾಡುವಂತೆ ಚಂದ್ರಲೋಕದವರು ಇಂಥ ಹಕ್ಕಿಗಳನ್ನು ಹತ್ತಿಕೊಂಡು ಹೋಗುತ್ತಿದ್ದರು.

ಚಂದ್ರಲೋಕದ ಜನರೂ ಅಷ್ಟೆ: ಒಂದೂವರೆ ತೆಂಗಿನ ಮರಕ್ಕಿಂತ ಕಡಿಮೆ ಎತ್ತರದವರೇ ಇಲ್ಲ. ಅಗಲ, ಅದಕ್ಕೆ ತಕ್ಕ ಹಾಗೆ. ಇವರ ತಲೆ ಇವರ ಕತ್ತಿನ ಮೇಲೆ ಇರುವುದಿಲ್ಲ. ಇವರು ತಮ್ಮ ತಲೆಗಳನ್ನು ಯಾವಾಗಲೂ ಎಡಕಂಕುಳಲ್ಲಿ ಇರುಕಿಕೊಂಡಿರುತ್ತಾರೆ. ಕತ್ತಿನ ಹತ್ತಿರ ಕಿವಿಗೆ ಬದಲಾಗಿ ಎರಡು ಸಣ್ಣ ರೆಕ್ಕೆ ಬೆಳೆದಿರುತ್ತದೆ. ಇವರ ಕಾಲುಗಳಲ್ಲಿ ಐದೈದು ಬೆರಳುಗಳಿದ್ದರೂ ಕೈಯಲ್ಲಿ ಮಾತ್ರ ಒಂದೊಂದೇ ಬೆರಳು. ಆದರೂ ನಾವು ಐದು

ಬೆರಳುಗಳಿಂದ ಮಾಡುವುದಕ್ಕಿಂತ ಹೆಚ್ಚಿನ ಕೆಲಸವನ್ನು ಇವರು ಒಂದೇ ಬೆರಳಿನಿಂದ ಸಾಧಿಸುತ್ತಾರೆ. ಇವರು ಎಲ್ಲಿಯಾದರೂ ಹೊರಗೆ ಸಂಚಾರ ಹೋಗಬೇಕಾದಾಗ ತಮ್ಮ ತಲೆಗಳನ್ನು ಮನೆಯಲ್ಲೇ ಬಿಟ್ಟು ಹೋಗುತ್ತಾರೆ; ಅದು ಸುತ್ತ ನಡೆಯುವುದೆಲ್ಲವನ್ನೂ ಕಾಣುತ್ತದೆ. ಅಥವಾ, ಒಂದೊಂದು ಸಲ, ತಮಗೆ



ಚಂದ್ರಲೋಕ ನಿವಾಸಿ

ಹೋಗುವುದಕ್ಕೆ ಬೇಸರವಾದರೆ ತಮ್ಮ ತಲೆಯನ್ನು ಮಾತ್ರ ಕಳುಹಿಸಿಕೊಡುತ್ತಾರೆ. ಅದು ಹೋಗಿ, ಬಂದು, ತಾನು ಕಂಡದ್ದನ್ನು ವರದಿ ಒಪ್ಪಿಸುತ್ತದೆ.

ಇವರಿಗೆ ತಮ್ಮ ಕಣ್ಣುಗಳನ್ನು ಕಳಚಿ, ಪುನಃ ಕೀಲಿಸುವ ಅನುಕೂಲವಿರುವದರಿಂದ ಈ ಲೋಕದಲ್ಲಿ ಕಣ್ಣುಗಳ ತಯಾರಿಕೆಯೂ ವ್ಯಾಪಾರವೂ ಹೆಚ್ಚು. ಕೆಂಪು, ಹಸಿರು, ನೀಲಿ, ಹಳದಿ, ಮುಂತಾದ ಬಣ್ಣಬಣ್ಣದ ಕಣ್ಣುಗಳನ್ನು ಇಲ್ಲಿ ತಯಾರಿಸುತ್ತಾರೆ. ಬೇಕಾದವರು ಬೇಕಾದ ಬಣ್ಣದ ಕಣ್ಣುಗಳನ್ನು ಬಳಸುತ್ತಾರೆ.

ಇವರ ದೇಹದ ಒಳಗಡೆ ಹೃದಯ, ಶ್ವಾಸಕೋಶ, ಹೊಟ್ಟೆ, ಕರುಳು ಮುಂತಾದ ಯಾವ ಅಂಗವೂ ಇಲ್ಲ. ಇವರ ಬಲ ಎದೆಯ ಹತ್ತಿರ ಒಂದು ಬಾಗಿಲಿದೆ. ಹಸಿವಾದಾಗ ಈ ಬಾಗಿಲನ್ನು ತೆರೆದು, ಆಹಾರವನ್ನು ಒಳಗೆ ಸುರಿದು, ಪುನಃ ಬಾಗಿಲು ಮುಚ್ಚುತ್ತಾರೆ. ತಿಂದದ್ದೆಲ್ಲ ಹಾಗೇ ಅಲ್ಲೇ ಜೀರ್ಣವಾಗಿಹೋಗುತ್ತದೆ. ಇವರು ತಿನ್ನುವುದಾದರೂ ತಿಂಗಳಿಗೆ ಒಂದು ಸಲ ಮಾತ್ರ. ಇವರು ಮಿತಾಹಾರಿಗಳು, ವರುಷಕ್ಕೆ ಹನ್ನೆರಡು ಸಲ ಮಾತ್ರ ಇವರು ಊಟಮಾಡುವರು.

ಇವರಲ್ಲಿ ಹೆಣ್ಣು ಗಂಡು ಎಂಬ ಭೇದವಿಲ್ಲ. ಇವರು ತರಕಾರಿ ಬೆಳೆದ ಹಾಗೆ ಗಿಡಗಳಲ್ಲಿ ಹುಟ್ಟಿ ಬೆಳೆಯುತ್ತಾರೆ. ಒಂದು ಗಿಡದಿಂದ ವಿಜ್ಞಾನಿ, ಇನ್ನೊಂದರಿಂದ ಕವಿ, ಮತ್ತೊಂದರಿಂದ ವೈದ್ಯ, ಬೇರೊಂದರಿಂದ ವ್ಯಾಪಾರಿ—ಹೀಗೆಯೇ ಬೇರೆ ಬೇರೆ ವೃತ್ತಿಯ ಜನ ಈ ಲೋಕದಲ್ಲಿ ಬೇರೆ ಬೇರೆ ಗಿಡಗಳಿಂದ ಹುಟ್ಟುತ್ತಾರೆ. ಇವರು ಬದುಕಿ ಬಾಳಿ, ಆಯುಸ್ಸು ಮುಗಿದಾಗ ಸಾಯುವುದಿಲ್ಲ; ಹೊಗೆಯ ಹಾಗೆ ಕರಗಿ, ಕಣ್ಣಿಗೆ ಕಾಣದೆ ಹೋಗುತ್ತಾರೆ.

ನಾನು ಚಂದ್ರಲೋಕಕ್ಕೆ ಹೋಗಿದ್ದಾಗ ಅಲ್ಲಿನ ರಾಜನಿಗೂ ಸೂರ್ಯನಿಗೂ ಯುದ್ಧ ಹತ್ತಿಕೊಂಡಿತ್ತು. ಚಂದ್ರರಾಜ ನನಗೂ ಒಬ್ಬ ಸೇನಾಧಿಪತಿಯ ಪಟ್ಟವನ್ನು ಕಟ್ಟುತ್ತೇನೆ ಎಂದ. ಆದರೆ ನಾನು ಬಹಳ ಉಪಾಯವಾಗಿ ಆ ಗೌರವದಿಂದ ತಪ್ಪಿಸಿಕೊಂಡೆ. ನಾನು ವೀರನೇ ಆದರೂ ಕೂಡ ಆ ಚಂದ್ರಲೋಕದವರ ಆಕಾರದ ಮುಂದೆ ನಾನು ಯಾವ ಮೂಲೆ? ಅಲ್ಲಿನ ಒಂದು ಸೊಳ್ಳೆ ನಮ್ಮಲ್ಲಿನ ಒಂದು ಕುರಿಯಷ್ಟು ದಪ್ಪ ಇತ್ತು!

ಚಂದ್ರಲೋಕದವರು ಯುದ್ಧ ಮಾಡಬೇಕಾದ ಪ್ರಸಂಗ ಬಂದಾಗ, ತಮ್ಮ ಪಕ್ಕದ 'ನಾಯಿ ನಕ್ಷತ್ರ'ದಲ್ಲಿ ಇದ್ದವರ ಸಹಾಯ ಕೋರುತ್ತಿದ್ದರು. ನಾನು ಹೋದ ಕಾಲದಲ್ಲಿ ಈ ನಾಯಿನಕ್ಷತ್ರವಾಸಿಗಳೂ ಕೆಲವರು ಅಲ್ಲಿ ಬಂದಿದ್ದರು. ಇವರಿಗೆ ನಾಯಿಯ ಹಾಗೆಯೇ ತಲೆ, ಬಾಲ, ಮೈಯಿ. ಇವರ ಕಣ್ಣು ಮೂಗಿನ ಕೆಳಗೆ, ಮೇಲುತುಟಿಯ ಮೇಲೆ ಇತ್ತು. ಕಣ್ಣುಗಳಿಗೆ ರೆಪ್ಪೆಗಳಿರಲಿಲ್ಲ. ನಿದ್ರೆ ಬಂದಾಗ, ತಮ್ಮ ನಾಲಿಗೆಯಿಂದ ಕಣ್ಣು ಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಇವರ ಎತ್ತರ ಕೂಡ ಒಂದು ಅಥವಾ ಒಂದೂಕಾಲು ತೆಂಗಿನ ಮರಕ್ಕೆ ಏನೂ ಕಡಿಮೆಯಿರ ಲಿಲ್ಲ. ಯುದ್ಧಕ್ಕೆ ನಿಂತಾಗ, ಇವರ ಅಮೋಘವಾದ ಆಯುಧ ವೆಂದರೆ, ಬಿಳಿಯ ಮೂಲಂಗಿ! ಇದು ಯಾರಿಗೆ ತಗುಲುವುದೋ ಅವರು ಪುನಃ ತಲೆಯೆತ್ತುವ ಮಾತೇ ಇಲ್ಲ! ಬಿಳಿಯ ಮೂಲಂಗಿ ಮುಗಿದು ಹೋದರೆ, ಬೆಳ್ಳುಳ್ಳಿಯ ಗಡ್ಡೆಗಳನ್ನು ಬಾಂಬು ಎಸೆದ ಹಾಗೆ ಎಸೆಯುತ್ತಿದ್ದರು. ಅದು ತಗುಲಿದವರು ತಟ್ಟನೆ ಮೂರ್ಛೆ ಬಿದ್ದು ಸಾಯುತ್ತಿದ್ದರು. ಈ ಎರಡು ಆಯುಧಗಳಲ್ಲದೆ, ನಾಯಿ ನಕ್ಷತ್ರದವರು ನಾಯಿಕೊಡೆಗಳನ್ನು ಗುರಾಣಿಯ ಹಾಗೆ ಹಿಡಿದು ತಮ್ಮನ್ನು ರಕ್ಷಿಸಿಕೊಳ್ಳುತ್ತಿದ್ದರು.

ಹೀಗೆಯೇ ನಾನು ಏನೇನು ಕಂಡೆ ಎಂಬುದನ್ನು ವರ್ಣಿಸುತ್ತ ಹೋದರೆ, ಅದಕ್ಕೆ ಮೊದಲೆಲ್ಲಿ? ಕೊನೆಯೆಲ್ಲಿ? ಅದೂ ಅಲ್ಲದೆ, ಇಷ್ಟು ವಿಚಿತ್ರವಾದ ಸಂಗತಿಗಳನ್ನು ನೀವಾದರೂ ನಂಬುತ್ತೀರೋ ಇಲ್ಲವೋ? ಹಾಗೆ ಯಾರಿಗಾದರೂ ನಾನು ಹೇಳಿದ ಕತೆಗಳ ಬಗ್ಗೆ ಸಂಶಯವಿರುವುದಾದರೆ, ನೀವೇ ಒಂದು ಸಲ



ನಾಯಿ ನಕ್ಷತ್ರ ನಿವಾಸಿ

ಚಂದ್ರಲೋಕಕ್ಕೆ ಹೋಗಿ ಬನ್ನಿ. ಆಗ, ನನ್ನ ಮಾತು ಸುಳ್ಳೋ ನಿಜವೋ ಎಂಬುದು ನಿಮಗೇ ಗೊತ್ತಾಗುತ್ತದೆ.

## ಮುಂಛೌಸನನ ಅಪ್ಪ

ನನ್ನ ಮಗನಾದ ಮುಂಛೌಸನ್ ತನ್ನ ಕೆಲವು ಅನುಭವ ಗಳನ್ನು ನಿಮಗೆ ಹೇಳಿದ್ದಾನಂತೆ. ನಾನೂ ಏನಾದರೂ ಹೇಳ ಬೇಕೆಂದು ಅವನ ಬಲವಂತ ಬಹಳ. ಆದ್ದರಿಂದ ನನ್ನದೂ ಒಂದು ಅನುಭವ ಹೇಳುತ್ತೇನೆ, ಕೇಳಿ.

ನಾನು ಇನ್ನೂ ಚಿಕ್ಕ ಹುಡುಗನಾಗಿದ್ದಾಗ ಆಗಲೇ ಸ್ವಲ್ಪ ಮುದುಕನಾಗಿದ್ದೆ. ಗಡ್ಡ, ಮೀಸೆ, ಎಲ್ಲಾ ನರೆತುಹೋಗಿತ್ತು.

ನಮ್ಮ ಮನೆಯ ತುಂಬ ಜೇನುಗೂಡುಗಳಿದ್ದುವು. ಅದ ರೊಳಗಿನ ಜೇನುಹುಳುಗಳನ್ನು ನಾನು ದಿನವೂ ಎಣಿಸಬೇಕಾಗಿತ್ತು. ಜೇನುಹುಳುಗಳು ಲೆಕ್ಕಕ್ಕೆ ಸಿಕ್ಕಿದರೂ, ಜೇನುಗೂಡುಗಳನ್ನು ಎಣಿಸುವುದಕ್ಕೇ ಸಾಧ್ಯವಾಗುತ್ತಿರಲಿಲ್ಲ.

ಒಂದು ದಿನ ಬೆಳಗ್ಗೆ, ಎಂದಿನ ಹಾಗೆಯೇ ಜೇನುಹುಳು ಗಳನ್ನು ಎಣಿಸುತ್ತಿದ್ದೆ. ಒಂದು ಜೇನುಹುಳು ಕಡಿಮೆಬಂತು. ಏನು ಮಾಡುವುದು? ನಮ್ಮ ಮನೆಯಲ್ಲಿ ದಿನಕ್ಕೆ ಮೂರು ಮೊಟ್ಟೆ ಯಿಡುತ್ತಿದ್ದ ಹುಂಜನನ್ನು ಸವಾರಿಮಾಡಿಕೊಂಡು ಆ ಜೇನುಹುಳು ವನ್ನು ಹುಡುಕಿಕೊಂಡು ಹೊರಟೆ.

ಆ ಜೇನುಹುಳುವಿನ ರೆಕ್ಕೆಯ ಗುರುತುಗಳನ್ನೇ ಹಿಂಬಾಲಿ ಸುತ್ತ ಬಂದೆ. ಸಮುದ್ರತೀರದವರೆಗೂ ಬಂದು ನೋಡಿದರೆ, ಅದು ಸಮುದ್ರವನ್ನು ದಾಟಿತ್ತೆಂದು ಕಂಡುಬಂತು. ನೀರಿನ ಮೇಲೂ ಅದರ ರೆಕ್ಕೆಯ ಗುರುತು ಸ್ಪಷ್ಟವಾಗಿ ಕಾಣಿಸುತ್ತಿತ್ತು.

ಸಮುದ್ರವನ್ನು ದಾಟಿ ಹೋದೆ. ಆಚೆಯ ದಡದಲ್ಲಿ ಒಬ್ಬ ರೈತ ನನ್ನ ಜೇನುಹುಳುವನ್ನು ತನ್ನ ನೇಗಿಲಿಗೆ ಹೂಡಿಕೊಂಡು ಗದ್ದೆಯನ್ನು ಉಳುತ್ತಿದ್ದ. "ಏಯ್! ಅದು ನನ್ನ ಜೇನು! ಕೊಡು ಇಲ್ಲಿ!" ಎಂದು ಕೂಗಿದೆ. ಅದಕ್ಕೆ ಅವನು "ನಿಮ್ಮ ದಾದರೆ ಅಗತ್ಯವಾಗಿ ತೆಗೆದುಕೊಳ್ಳಿ" ಎಂದ. "ಇಷ್ಟು ಹೊತ್ತೂ ಅದನ್ನು ದುಡಿಸಿದುದಕ್ಕೆ ಕೂಲಿ?" ಎಂದೆ. ಅವನು ಜೇನು ಹುಳುವಿನ ಕೂಲಿಗಾಗಿ ಒಂದು ಚೀಲ ರಾಗಿ ಕೊಟ್ಟ.

ಆ ರಾಗಿಯ ಚೀಲವನ್ನು ಬೆನ್ನಿಗೆ ಬಿಗಿದುಕೊಂಡೆ. 'ಪಾಪ, ನನ್ನನ್ನು ಹೊತ್ತೂ ಹೊತ್ತೂ ಹುಂಜ ಬಹಳ ಬಳಲಿದೆ' ಎಂದು, ಅದರ ಬೆನ್ನಿನಿಂದ ಕೆಳಗಿಳಿದು, ಜೇನುಹುಳುವಿನ ಮೇಲೆ ಏರಿ ಕೊಂಡೆ. ಹುಂಜ ನನ್ನ ಹಿಂದೆ ಹಾರಿ ಬರುತ್ತಿತ್ತು.

ಮನೆಗೆ ಹಿಂದಿರುಗಿ ಹೋಗುವಾಗ ಪುನಃ ಸಮುದ್ರವನ್ನು ದಾಟಿದೆವು. ಸ್ವಲ್ಪ ಸಂಜೆಗತ್ತಲು ಆಗುತ್ತಿದ್ದುದರಿಂದ ಹುಂಜಕ್ಕೆ ಕಣ್ಣು ಸರಿಯಾಗಿ ಕಾಣದೆ, ಮುಂದೆ ಬಂದು ನನ್ನ ಬೆನ್ನಿಗೆ ಢಿಕ್ಕಿ ಹೊಡೆಯಿತು. ಬೆನ್ನಿಗೆ ಕಟ್ಟಿಕೊಂಡಿದ್ದ ರಾಗಿಯ ಚೀಲ ಹರಿದು ಹೋಯಿತು. ರಾಗಿಯೆಲ್ಲ ನೀರಿನಲ್ಲಿ ಸುರಿದುಹೋಯಿತು.

ಆ ವೇಳೆಗೆ ಸಮುದ್ರವನ್ನು ದಾಟಿ, ದಡಕ್ಕೆ ಬಂದಿದ್ದೆವು. ನಾನೂ ಜೇನುಹುಳುವಿನ ಬೆನ್ನಿನಿಂದ ಇಳಿದು, ಅದಕ್ಕೆ ಹುಲ್ಲು ಮೇಯಿಸಿದೆ. ಹುಂಜವನ್ನು ನನ್ನ ಹತ್ತಿರದಲ್ಲಿಯೇ ಕಟ್ಟಿ ಹಾಕಿ, ಅದಕ್ಕೂ ನನ್ನ ಬುತ್ತಿಯಿಂದಲೇ ಸ್ವಲ್ಪ ಒಣರೊಟ್ಟಿ ಕೊಟ್ಟೆ. ಆ ಮೇಲೆ ನಾವು ಮೂವರೂ ನಿದ್ರೆಮಾಡಿದೆವು.

ಬೆಳಗ್ಗೆ ಎದ್ದು ನೋಡಿದರೆ, ನನ್ನ ಆಶ್ಚರ್ಯವನ್ನು ಏನೆಂದು ವರ್ಣಿಸಲಿ! ರಾತ್ರೆ ನಾನು ಮಲಗಿದ್ದಾಗ ತೋಳಗಳ ಹಿಂಡು ಬಂದು ನನ್ನ ಜೇನುಹುಳುವನ್ನು ಸಿಗಿದು, ಸೀಳಿ, ನುಂಗಿಹಾಕಿ

ಬಿಟ್ಟಿದ್ದುವು. ಸುತ್ತಲೂ ಇದ್ದ ಬೆಟ್ಟಗಳ ನಡುವಿನ ಕಣಿವೆಗಳಲ್ಲಿ ಜೇನುತುಪ್ಪ ಮೊಣಕಾಲುದ್ದ ಮಡುಗಟ್ಟಿ ನಿಂತಿತ್ತು.

"ಅನ್ಯಾಯವಾಗಿ ಇಷ್ಟು ಜೇನುತುಪ್ಪ ವ್ಯರ್ಥವಾಗುತ್ತದಲ್ಲ! ಏನು ಮಾಡೋಣ?" ಎಂದು ಯೋಚಿಸಿದೆ. ನನ್ನ ಹತ್ತಿರ ಯಾವುದೂ ಪಾತ್ರೆಯಿರಲಿಲ್ಲ. ಆದರೆ ಒಂದು ಕೊಡಲಿ ಇತ್ತು. ಅದನ್ನೇ ಹಿಡಿದುಕೊಂಡು ಪಕ್ಕದ ಕಾಡಿಗೆ ಹೋದೆ. ಅಲ್ಲಿ ಎರಡು ಜಿಂಕೆ ಒಂದೇ ಕಾಲಿನ ಮೇಲೆ ನರ್ತನಮಾಡುತ್ತಿದ್ದುವು. ನನ್ನ ಕೊಡಲಿಯನ್ನು ಬೀಸಿ ಎಸೆದು, ಅವುಗಳ ಕಾಲು ಮುರಿದು, ಅವುಗಳ ಮೂರು ಚರ್ಮದಿಂದ ಎರಡು ಚೀಲ ಮಾಡಿದೆ. ಅದರ ತುಂಬ ಆ ಜೇನುತುಪ್ಪ ತುಂಬಿಕೊಂಡು, ಅದನ್ನು ಹುಂಜದ ಮೇಲೆ ಹೇರಿ, ಮನೆಯ ಕಡೆಗೆ ಹೊರಟೆ.

ನಾನು ಮನೆಯ ಹತ್ತಿರ ಬರುವ ವೇಳೆಗೆ ಆಗ ತಾನೆ ನಮ್ಮ ತಂದೆಯ ಜನನವಾಗಿ ಅವರಿಗೆ ನಾಮಕರಣ ಮಹೋತ್ಸವ ನಡೆಯುತ್ತಿತ್ತು. ಪುರೋಹಿತರು ಯಾರೂ ಬಂದಿರಲಿಲ್ಲ. 'ಸ್ವರ್ಗಕ್ಕೆ ಹೋಗಿ ಪುರೋಹಿತರನ್ನು ಕರೆದುಕೊಂಡು ಬಾ' ಎಂದು ನನ್ನ ಮಗ ನನಗೆ ಆಜ್ಞೆಮಾಡಿದ. ಸ್ವರ್ಗಕ್ಕೆ ಹೋಗುವ ದಾರಿ ಯಾವುದೋ ನನಗೆ ಗೊತ್ತಿರಲಿಲ್ಲ. ಯಾರನ್ನಾದರೂ ಕೇಳೋಣವೆನ್ನುವ ಹೊತ್ತಿಗೆ ಸಮುದ್ರದಲ್ಲಿ ಸುರಿದುಹೋದ ನನ್ನ ರಾಗಿಯ ಜ್ಞಾಪಕ ಬಂತು.

ಬೇಗ ಬೇಗ ಅಲ್ಲಿಗೆ ಓಡಿಹೋದೆ. ರಾಗಿ ಮೊಳೆತು, ಗಿಡವಾಗಿ, ಆಕಾಶದವರೆಗೂ ಬೆಳೆದು ನಿಂತಿತ್ತು. ನಾನೂ ಬರಬರನೆ ಅದನ್ನು ಹತ್ತಿ ಮೇಲೆ ಹೋದೆ. ಸ್ವರ್ಗವನ್ನು ನಾನು ಸೇರುವ ವೇಳೆಗೆ ರಾಗಿಯ ಗಿಡದ ತುದಿಯಲ್ಲಿ ತೆನೆ ಹಣ್ಣಾಗಿ ತಲೆದೂಗುತ್ತಿತ್ತು. ಅಲ್ಲಿ ಒಬ್ಬ ಗಂಧರ್ವ ಸ್ವಲ್ಪ ರಾಗಿಯನ್ನು ಕುಯಿದು

ಕೊಂಡು, ಅದನ್ನು ಬೀಸಿ ಹಿಟ್ಟುಮಾಡಿ, ಕಲಸಿ, ತಟ್ಟಿ, ಸುಟ್ಟು, ರೊಟ್ಟಿ ಮಾಡಿಕೊಂಡು ತಿನ್ನುತ್ತಿದ್ದ.

ನಾನು ಅವನಿಗೆ ನಮಸ್ಕಾರಮಾಡಿ, ಸ್ವರ್ಗದಲ್ಲಿ ಇರುವವರ ಯೋಗಕ್ಷೇಮವನ್ನು ವಿಚಾರಿಸಿದ ಮೇಲೆ, "ಹೀಗೆ, ನಮ್ಮ ತಂದೆಗೆ ಈಗ ತಾನೆ ನಾಮಕರಣೋತ್ಸವ ನಡೆಯಬೇಕಾಗಿದೆ. ಮಂತ್ರ ಬಲ್ಲ ಪುರೋಹಿತರು ಯಾರನ್ನಾದರೂ ದಯಮಾಡಿ ಕಳುಹಿಸಿ ಕೊಡಬೇಕು" ಎಂದು ಪ್ರಾರ್ಥಿಸಿದೆ. ಅದರಂತೆ ಒಬ್ಬ ಪುರೋಹಿತರು ನನ್ನ ಜೊತೆಯಲ್ಲಿ ಹೊರಟರು.

ಆದರೆ ಒಳಗಡೆ ನಾನು ರಾಗಿಯ ರೊಟ್ಟಿ ತಿನ್ನುತ್ತಿರುವಾಗ ಹೊರಗಡೆ ಅಸಾಧ್ಯವಾಗಿ ಮಳೆ ಹುಯಿದು, ದೊಡ್ಡ ಪ್ರವಾಹ ಬಂದು, ನಾನು ಹತ್ತಿಕೊಂಡು ಬಂದಿದ್ದ ರಾಗಿಯ ಗಿಡ ಕೊಚ್ಚಿಕೊಂಡು ಹೋಗಿತ್ತು. "ಅಯ್ಯಯ್ಯೋ! ಕೆಳಗೆ ಇಳಿಯುವುದು ಹೇಗೆ?" ಎಂದು ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತೆ.

ನನ್ನ ಕೈತುಂಬ ನನ್ನ ತಲೆಕೂದಲು ಸಿಕ್ಕಿತು. ನನ್ನ ತಲೆಕೂದಲಾದರೋ ತುಂಬ ಉದ್ದ. ನಿಂತರೆ ನೆಲವನ್ನು ಗುಡಿಸುತ್ತಿತ್ತು, ಕುಳಿತುಕೊಂಡರೆ ಕಿವಿಯನ್ನು ಮುಚ್ಚುತ್ತಿತ್ತು. ಒಡನೆಯೆ ಜೇಬಿನಲ್ಲಿದ್ದ ಚಾಕುವನ್ನು ತೆಗೆದು, ಒಂದೊಂದು ಕೂದಲನ್ನೂ ಕುಯಿದು, ಒಂದನ್ನು ಒಂದಕ್ಕೆ ಗಂಟುಹಾಕಿ, ಆ ಉದ್ದವಾದ ದಾರದ ಮೂಲಕ ನಾನೂ ಪುರೋಹಿತನೂ ಭೂಮಿಗೆ ಇಳಿದೆವು.

ಇಳಿದೆವು, ಎಂದರೆ ಇಳಿಯಲು ತೊಡಗಿದೆವು. ನೀವು ತ್ರಿಶಂಕು ಸ್ವರ್ಗ ಎನ್ನುತ್ತೀರಲ್ಲ, ಅದರ ಹತ್ತಿರ ಬಂದಿದ್ದೆವು. ಆ ವೇಳೆಗೆ ಬಹಳ ಕತ್ತಲೆಯಾಗಿಹೋಯಿತು. ಕಣ್ಣು ಕಾಣದ ಕತ್ತಲೆಯಲ್ಲಿ ಕೆಳಗಿಳಿಯುವುದು ತುಂಬ ಅಪಾಯವೆಂದು ಅಲ್ಲೇ ನಿಂತೆವು. ತ್ರಿಶಂಕು ನಮ್ಮನ್ನು ತನ್ನ ಸ್ವರ್ಗಕ್ಕೆ ಬರಹೇಳಿದ. ಆದರೆ ಅವನ

ವಿಚಾರವಾಗಿ ಏನೇನೋ ಕಥೆ ಕೇಳಿದ್ದೆವಾದ್ದರಿಂದ ಅಲ್ಲಿ ಹೋಗಲು ಮನಸ್ಸು ಬರಲಿಲ್ಲ. ಅಲ್ಲಿಯೇ ಆ ಕೂದಲಿನ ಹಗ್ಗದಿಂದ ಒಂದು ತೊಟ್ಟಿಲನ್ನು ಹೆಣೆದು, ಅದರೊಳಗೆ ಮಲಗಿಕೊಂಡೆವು.

ಮಲಗಿಕೊಂಡರೂ ಬೇಗ ನಿದ್ರೆ ಬರಲಿಲ್ಲ. ಏನಾದರೂ ಪುಸ್ತಕ ಓದುತ್ತ ಮಲಗಿದರಾದರೂ ನಿದ್ರೆ ಬರುವುದೋ ಏನೋ ಎಂದು ನೋಡಿದರೆ, ದೀಪ ಎಲ್ಲಿಂದ ತರುವುದು? ನನ್ನ ಜೇಬಿನಲ್ಲಿ ಬೆಂಕಿಕಡ್ಡಿಯ ಪೆಟ್ಟಿಗೆಯೇನೋ ಇತ್ತು. ಆದರೆ, ದೀಪ?

'ಏನು ಮಾಡುವುದು?' ಎಂದು ಚಿಂತಿಸುತ್ತ ಹಾಗೇ ಹೊರಳಿದಾಗ ಪಕ್ಕದಲ್ಲಿ ಏನೋ ಚುಚ್ಚಿದ ಹಾಗಾಯಿತು. ಕೈಹಾಕಿ ನೋಡಿದೆ. ಅಂಗಿಯ ಜೇಬಿನಲ್ಲಿದ್ದ ಒಂದು ಹೊಲಿಯುವ ಸೂಜಿ ಕೈಗೆ ಸಿಕ್ಕಿತು. ಅದನ್ನು ಹೊರಗೆಳೆದು, ಉಗುರುಗಳಿಂದ ಸಣ್ಣಗೆ ಸೀಳಿ, ಬೆಂಕಿಕಡ್ಡಿ ಗೀಚಿ, ಹತ್ತಿಸಿದೆ. ಬೆಂಕಿ ಬಹಳ ಚೆನ್ನಾಗಿ ಉರಿಯಿತು. ಓದುವುದಕ್ಕೆ ಬೆಳಕಾದುದು ಮಾತ್ರವಲ್ಲದೆ, ಆ ಚಳಿಯಲ್ಲಿ ಮೈಯೂ ಬೆಚ್ಚಗಾಯಿತು. ಬಹು ಬೇಗ ಸುಖವಾಗಿ ನಿದ್ರೆ ಬಂತು.

ಆದರೆ ಮಾತ್ರ, ಅನ್ಯಾಯ! ನನಗೆ ಗಾಢವಾಗಿ ನಿದ್ರೆಹತ್ತಿರುವಾಗ, ನಾನು ಮಲಗಿದ್ದ ತೊಟ್ಟಿಲಿಗೆ ಬೆಂಕಿ ತಾಕಿ, ಅದು ಸುಟ್ಟು ಬೂದಿಯಾಗಿಹೋಯಿತು. ಹಿಂದೆ ನಿಮ್ಮ ತ್ರಿಶಂಕು ರಾಜ ಸ್ವರ್ಗದಿಂದ ಬಿದ್ದನಂತಲ್ಲ, ಹಾಗೆ ನಾನೂ ತಲೆಕೆಳಗಾಗಿ ಉರುಳುರುಳಿ ಬಿದ್ದು, ಭೂಮಿಯನ್ನು ತಾಗಿದೊಡನೆ ಸೊಂಟದವರೆಗೂ ಹೂತುಹೋದೆ.

ಬಿಡಿಸಿಕೊಳ್ಳೋಣವೆಂದು ಎಷ್ಟೆಷ್ಟೋ ಒದ್ದಾಡಿದರೂ ಆಗಲಿಲ್ಲ. "ಅಯ್ಯೋ, ಇದಕ್ಕೆ ಇಷ್ಟು ಆಯಾಸವೇಕೆ?" ಎಂದುಕೊಂಡು, ನೇರವಾಗಿ ಮನೆಗೆ ಓಡಿಹೋಗಿ, ಒಂದು ಗುದ್ದಲಿ

ತಂದು, ನನ್ನ ಸುತ್ತಲೂ ಒಂದು ಹಳ್ಳ ಅಗೆದು, ಸುಲಭವಾಗಿ ಮೇಲೆದ್ದು ಬಂದೆ. ಅದುವರೆಗೆ ನನ್ನ ತಲೆಯಮೇಲೆ ಕುಳಿತು ಕೊಂಡಿದ್ದ ಪುರೋಹಿತನನ್ನು ಕೆಳಗಿಳಿಸಿ, ಅವನ ಕೈಹಿಡಿದು ಮನೆಗೆ ನಡೆಸಿಕೊಂಡು ಬಂದೆ.

ನಾನು ಮನೆಯ ಹತ್ತಿರ ಬಂದಾಗ ನಮ್ಮ ತಂದೆ ತಾಯಿ ತಾತ ಮುತ್ತಾತ ಎಲ್ಲರೂ ಗದ್ದೆಯಲ್ಲಿ ಬಾವಿ ಅಗೆಯುತ್ತಿದ್ದರು. ಸೂರ್ಯನ ಬೆಳುದಿಂಗಳು ಆಲಿಕಲ್ಲಿನ ಹಾಗೆ ಭಯಂಕರವಾಗಿ ಸುಡುತ್ತಿತ್ತು. ಎಲ್ಲರ ಮುಖಗಳಿಂದಲೂ ಬೆವರು ಹೊಳೆಹೊಳೆ ಯಾಗಿ ಹರಿದು, ಅವರು ತೋಡುತ್ತಿದ್ದ ಬಾವಿಗಳಲ್ಲಿ ತುಂಬಿ ಕೊಳ್ಳುತ್ತಿತ್ತು.

ನಾನು ಅವರ ಆಯಾಸವನ್ನು ನೋಡಲಾರದೆ "ಮೂರು ದಿನ ಉದ್ದವೂ ಎರಡು ಗಂಟೆ ಎತ್ತರವೂ ನಾಲ್ಕು ಸೇರು ಅಗಲವೂ ಆದ ನಮ್ಮ ಕುದುರೆಯನ್ನು ಏಕೆ ಕರೆದು ತರಲಿಲ್ಲ? ಅದರ ನೆರಳಿ ನಲ್ಲಿ ನೀವೆಲ್ಲರೂ ತಣ್ಣಗೆ ಕೆಲಸ ಮಾಡಬಹುದಾಗಿತ್ತಲ್ಲ!" ಎಂದೆ.

ಅದನ್ನು ಕೇಳಿದೊಡನೆ, ನಮ್ಮ ತಂದೆ "ಅರೇರೇ! ನಮಗೆ ಇದು ಹೊಳೆಯಲೇ ಇಲ್ಲವಲ್ಲ!" ಎಂದು ತಟಕ್ಕನೆ ಮನೆಗೆ ಹೋಗಿ ಕುದುರೆಯನ್ನು ತಂದರು. ಅನಂತರ ಎಲ್ಲರೂ ಅದರ ನೆರಳಿನಲ್ಲಿ ಅಗೆಯತೊಡಗಿದರು.

ಸ್ವಲ್ಪ ಹೊತ್ತಾದ ಮೇಲೆ, "ಮನೆಯ ಬಾವಿಯಿಂದ ಸಿಹಿ ನೀರು ತಾ" ಎಂದರು. ನಾನು ನೀರು ತರುವುದಕ್ಕೆ ಒಂದು ಎಲೆ ತೆಗೆದುಕೊಂಡು ಹೊರಟೆ. ನೀರು ಕಲ್ಲಿನ ಹಾಗೆ ಗಟ್ಟಿಯಾಗಿ ಬಿಟ್ಟಿತ್ತು. ಅದನ್ನು ಒಡೆಯುವುದಕ್ಕೆ ಯಾವುದೂ ಕಲ್ಲು ಸಿಕ್ಕಲಿಲ್ಲ. ನನ್ನ ತಲೆಯನ್ನೇ ತೆಗೆದು, ಅಲ್ಲಿ ಹೆಪ್ಪುಗಟ್ಟಿದ್ದ ನೀರನ್ನು ಚೆಚ್ಚಿ, ಅದನ್ನು ಎಲೆಯಲ್ಲಿ ತುಂಬಿಕೊಂಡು ತಂದುಕೊಟ್ಟೆ.

“ ನಿನ್ನ ತಲೆ ಎಲ್ಲೊ ? ” ಎಂದು ನಮ್ಮ ತಂದೆ ಕೇಳಿದರು. ಮುಟ್ಟಿ ನೋಡಿಕೊಂಡೆ. ತಲೆಯೇ ಇರಲಿಲ್ಲ. ಆಗ, ಅದನ್ನು ಬಾವಿಯ ಹತ್ತಿರ ಬಿಟ್ಟಿದ್ದೆನೆಂದು ಜ್ಞಾಪಕವಾಯಿತು. ಒಡನೆಯೆ ಓಡಿಹೋದೆ. ಆ ವೇಳೆಗೆ ಒಂದು ನರಿ ಅಲ್ಲಿಗೆ ಬಂದು, ಅದನ್ನು ತಿನ್ನಲು ತೊಡಗಿತ್ತು. ನಾನು ಮೆಲ್ಲನೆ ಸದ್ದುಮಾಡದೆ ಹಿಂದೆ ಬಂದು, ಅದರ ಬೆನ್ನಿನ ಮೇಲೆ ಒಂದು ಒದೆ ಒದ್ದೆ.

ಆ ನರಿ ಆಗ ತಾನೆ ಒಂದು ಸಿಂಹದ ತಲೆಯನ್ನು ನುಂಗಿ ಬಂದಿತ್ತು. ನಾನು ಒದೆ ಒದ್ದೊಡನೆ, ಅದು ತಾನು ನುಂಗಿದ್ದ ಸಿಂಹದ ತಲೆಯನ್ನು ಕಕ್ಕಿತು. ‘ ಹೇಗೂ ನನ್ನ ತಲೆ ಹೋಯಿತು ’ ಎಂದು ಆ ಸಿಂಹದ ತಲೆಯನ್ನೇ ನಾನು ನನ್ನ ಕತ್ತಿನ ಮೇಲೆ ಸಿಕ್ಕಿಸಿಕೊಂಡೆ. ಅಂದಿನಿಂದ ನಾನು ನಿಮ್ಮ ‘ ನರಸಿಂಹ’ನ ಹಾಗೆ ‘ ನರ–ಸಿಂಹ’ನೇ ಆಗಿದ್ದೇನೆ.



ಬೆಂಗಳೂರು ಸಿಟಿ ಕೆ. ಪಿ. ಎಚ್. ಪ್ರೆಸ್ಸಿನಲ್ಲಿ
ಡಿ.ವಿ. ರಾಮರಾಯರಿಂದ ಮುದ್ರಿತವಾದುದು—೫೯೦-೧೭-೭-೧೯೪೬—೨೦೦೦

# ಮಕ್ಕಳಿಗೆ ಸಚಿತ್ರವಾದ ಕಥೆಗಳು

( ಜಿ. ಪಿ. ರಾಜರತ್ನಂ ಬರೆದುದು )

## ಈಗ ತಾನೆ ಅಚ್ಚಾಗಿರುವ

೧. ಪಂಡಿತನ ನೆರಳು
೨. ತೆನಾಲಿ ರಾಮ
೩. ಮಕ್ಕಳ ಮಂಛೌಸನ್
೪. ಪುಟಾಣಿ ಪಂಚತಂತ್ರ

## ಸದ್ಯದಲ್ಲಿಯೇ ಅಚ್ಚಾಗಿ ಬರುವ

೫. ವಾಸವದತ್ತಾ
೬. ವಸಂತಸೇನಾ
೭. ಜೀಮೂತವಾಹನ
೮ ಚಂದನದಾಸ
೯. ಭಾಸನ ಭಾರತ
೧೦. ಆಲಿವರ್ ಟ್ವಿಸ್ಟ್
೧೧. ರಾಬಿನ್ ಹುಡ್
೧೨. ವಿಲಿಯಂ ಟೆಲ್

ಇದುವರೆಗೆ ಅಚ್ಚಾಗಿರುವ ಮಕ್ಕಳ ಪುಸ್ತಕಗಳ
ಪಟ್ಟಿ ಬೇಕಾದರೆ ಒಳಗಿದೆ

ಕೆ. ಪಿ. ಎಚ್. ಪ್ರೆಸ್, ಕೋಟೆ, ಬೆಂಗಳೂರು ಸಿಟಿ